ಬೆಲೆ: ಎರಡು ಆಣೆ

# ಕರ್ಮವೀರ



ಸಂಪಾದಕರು:
ಹ. ರಾ. ಪುರೋಹಿತ, ಎಂ. ಎ.

)——ಅಖಿಲ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯ ವಾರಪತ್ರಿಕೆ——(

Editor
H. R. Purohit, M. A.

—( ಸಂಪುಟ ೧೯ )— ಹುಬ್ಬಳ್ಳಿ ಸೋಮವಾರ ತಾರೀಖು ೧೭—೧೧—೧೯೪೭ —( ಸಂಚಿಕೆ ೩೧ )—

## ಭಾರತ ವಿಭಜನೆಯ ಪರಿಣಾಮ

ಭಾರತದ ವಿಭಜನೆಯಿಂದ ಹಿಂದೀಯರಿಗೆ ಆದ ಅನ್ಯಾಯವನ್ನು ಎಲ್ಲರೂ ಬಲ್ಲರು. ಸ್ವಾತಂತ್ರ್ಯ ... ಸಂಪೂರ್ಣ ಸಮಾಧಾನದಿಂದ ಅದನ್ನು ಸಹಿಯಲು ಈ ಮರ್ಮಭೇದಕ ವ್ಯಥೆಯು ಅಡ್ಡ ಬಂದಿತು. ಮೊದಲು ಕಾಶ್ಮೀರ ಹೈದರಾಬಾದುಗಳನ್ನುಳಿದು ಮಿಕ್ಕೆಲ್ಲ ಸಂಸ್ಥಾನಗಳು ಎರಡರಲ್ಲೊಂದು ಅಧಿರಾಜ್ಯಗಳಿಗೆ ಸೇರಿದವು. ಇತ್ತೀಚೆಗೆ, ಬಲಗಡೆಯ ನಕ್ಷೆ ತಯಾರಾಗುವ ಮೊದಲು ಕಾಶ್ಮೀರವು ಹಿಂದೀ ಒಕ್ಕೂಟಕ್ಕೆ ಸೇರಿತು. ಈಗ ಉಳಿದದ್ದು ಹೈದರಾಬಾದೊಂದೇ ಈ ವಿಭಜನೆಯಿಂದ ಅಧಿರಾಜ್ಯಗಳ ವ್ಯಾಪಾರವಾಣಿಜ್ಯ ಕೈಗಾರಿಕೆಗಳ ಮೇಲೆ ಈಗ ಯಾವ ಪರಿಣಾಮವುಂಟಾಗಿದೆ ಮತ್ತು ಮುಂದೆ ಯಾವುದುಂಟಾಗಬಹುದೆಂಬುದನ್ನು ವಿಚಾರ ಮಾಡಬೇಕಾಗಿದೆ.

### ಪಂಜಾಬಿನ ದುರಂತ

ಎರಡೂ ಅಧಿರಾಜ್ಯಗಳ ಆರ್ಥಿಕ ಪರಿಸ್ಥಿತಿಯನ್ನು ಪರಿಶೀಲಿಸ ಬಯಸುವವರು ಪಂಜಾಬು ಬಂಗಾಲ ಪ್ರಾಂತಗಳ ವಿಭಜನೆ ಯಾವ ರೀತಿಯಿಂದ ಆಯಿತು ಮತ್ತು ಇಂದು ಪಂಜಾಬಿನಲ್ಲಿ ಎಂತಹ ದಾರುಣ ಕಥೆ ನಡೆಯುತ್ತಿದೆ ಎಂಬುದನ್ನು ಗಣನೆಗೆ ತರದಿರಲಾರರು. ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿ ವಿಭಕ್ತ ಪ್ರಾಂತದ ಜನತೆ ಹೈರಾಣಾಗಿ ಹೋಗಿದೆ. ಇಂದು ಏಳಿಗೆಯಲ್ಲಿದ್ದ ಅನೇಕ ಕೈಗಾರಿಕೆಗಳು ಮತ್ತು ಫಲವತ್ತಾದ ಜಮೀನುಗಳು ಹಾಳಾಗಿ ಹೋಗಿವೆ. ಜನವಿನಿಮಯಕ್ಕಾಗಿ ಅಸಂಖ್ಯಾಕ ಪ್ರಜೆಗಳು ಪಾಕಿಸ್ತಾನ ಹಿಂದುಸ್ತಾನಗಳ ನಡುವೆ ಹರಿದು ಹಾಯುತ್ತಿದ್ದಾರೆ. ರಾಜಕೀಯ ವಿಭಜನೆಯಿಂದಲ್ಲದೆ ಇತರ ರೀತಿಯಿಂದಲೂ ಪಂಜಾಬಿಂದು ಹರಿದು ಹಂಚಾಗಿದೆ. ಅದಕ್ಕೆ ಹಿಂದಿನ ಆರ್ಥಿಕ ಮಟ್ಟವನ್ನು ಮುಟ್ಟಲು ಬಹಳಕಾಲ ಬೇಕಾಗಬಹುದು. ಪಶ್ಚಿಮಪಂಜಾಬಿನಲ್ಲಿ ನೂರಕ್ಕೆ ೯೫ರಷ್ಟು ಮುಸಲ್ಮಾನರು ಪೂರ್ವ ಪಂಜಾಬಿನಲ್ಲಿ ಅದೇಪ್ರಕಾರ ಹಿಂದು ಶೀಖರು ಬಹು ಸಂಖ್ಯಾಕರಾಗಿ ಉಳಿಯಬಹುದು. ಈಗ ಪಂಜಾಬಿನ ಪ್ರಾಮುಖ್ಯ ನಷ್ಟವಾಗಿ ಹೋಗಿದೆ! ಅದನ್ನು ಪಾಕಿಸ್ತಾನದ ರಾಜಧಾನಿಯಾದ ಕರಾಚಿ ಅಪಹರಿಸಿದೆ.

### ಹೊಸ ಪ್ರಾಣಸ್ಥಾನಗಳು

ಕರಾಚಿಗೆ ಬಹು ಉತ್ತಮವಾದ ಭವಿಷ್ಯವಿದೆ. ಅದು ಒಂದು ಅತಿ ಪ್ರಮುಖ ಬಂದರು ಮತ್ತು ವಿಮಾನ ನಿಲ್ದಾಣ ಎನಿಸಿದೆ. ಪಾಕಿಸ್ತಾನದ ರಾಜಧಾನಿ ಸ್ಥಾಪಿತವಾದೊಡನೆ ಅದೊಂದು ದೊಡ್ಡ ವ್ಯಾಪಾರ ಕೇಂದ್ರವಾಗಲಿದೆ. ಅದರಂತೆಯೇ ಅತ್ತ ಮುಸ್ಲಿಂ ಪ್ರದೇಶಗಳಲ್ಲಿಯ ಹಿಂದುಗಳೆಲ್ಲ ದಿಲ್ಲಿಗೆ ನುಗ್ಗುತ್ತಿದ್ದಾರೆ. ಅವರ ಕೈಗಾರಿಕೆಯ ಕೇಂದ್ರಗಳೆಲ್ಲ ಅಲ್ಲಿಗೆ ಸ್ಥಳಾಂತರಿತವಾಗಬಹುದು. ಪತ್ರಿಕಾ ಸಂಸ್ಥೆಗಳ ಕಥೆಯೂ ಅಷ್ಟೆ. ಬದಲಾದ ಪರಿಸ್ಥಿತಿಗೆ ತಕ್ಕಂತೆ ಹೊಂದಿಕೊಂಡರೆ ಇದ್ದಲ್ಲೇ ಇರಬಹುದು! ಅಲ್ಲದಿದ್ದರೆ ಈಗಿಂದೀಗ ಅವು ಸ್ಥಳಾಂತರ ಹೊಂದಬೇಕಾಗುವುದು.

### ಬಂಗಾಲದ ವಿಭಜನೆ

ಬಂಗಾಲದ ವಿಭಜನೆಯಿಂದ ಪೂರ್ವ ಪಾಕಿಸ್ತಾನದ ಹಿಕ್ಕಲುತನಗಳ ಪ್ರಾಮುಖ್ಯ ಹೆಚ್ಚಾಗುವಂತಾಯಿತು. ಪಶ್ಚಿಮ ಬಂಗಾಲದ ಕೈಗಾರಿಕೆಗಳು ಯಥಾಪೂರ್ವ ಸಾಗುವುದರಲ್ಲಿ ಸಂಶಯವಿಲ್ಲ. ಪೂರ್ವಪಾಕಿಸ್ತಾನಕ್ಕೆ ಇರುವ ಒಂದೇ ಒಂದು ಸಮುದ್ರದ್ವಾರವೆಂದರೆ ಚಿತಗಾಂಗಿನಲ್ಲಿರುವ ಸಾಕ್ಸ ಬಜಾರ್ ಎಂಬುದೆ. ಆದರೆ ಅದರಿಂದ ಪಶ್ಚಿಮ ಪಂಜಾಬಿನ ವ್ಯಾಪಾರ, ಕೈಗಾರಿಕೆಗಳಿಗೆ ಯಾವ ತರದ ತೊಂದರೆಯೂ ಉಂಟಾಗಲಾರದು.

### ಕಾಶ್ಮೀರದ ಕರ್ಮಕಥೆ

ಕಾಶ್ಮೀರದ ಮಹಾರಾಜರು ಮೊದಲು ವಿಳಂಬ ಮಾಡುತ್ತಿದ್ದು ಪಾಕಿಸ್ತಾನದ ಪುಂಡರು ದಾಳಿಗಾರಂಭಿಸಿದೊಡನೆ ಗಾಬರಿಗೊಂಡು ನಿರ್ವಾಹವಿಲ್ಲದೆ ಹಿಂದೀ ಒಕ್ಕೂಟವನ್ನು ಸೇರಿದರು. ಆದರೆ ಇದು ಕೊನೆಯದೆಂದು ಹಿಂದುಸ್ತಾನ ಸರಕಾರ ಒಪ್ಪಿಲ್ಲ. ಶಾಂತಿ ಸುವ್ಯವಸ್ಥೆಗಳು ಸ್ಥಾಪಿತವಾದ ನಂತರ ಸಾರ್ವಜನಿಕ ಮತಗಣನೆ ನಡೆಯಿಸಿ ಅದರ ಮೇಲೆ ಕಾಶ್ಮೀರದ ಭವಿತವ್ಯ ನಿರ್ಣಯವಾಗತಕ್ಕದೆಂದು ಕರಾರು ಹಾಕಲ್ಪಟ್ಟಿದೆ. ಕಾಶ್ಮೀರ ಹಿಂದೀ ಒಕ್ಕೂಟಕ್ಕೆ ಸೇರಿದ್ದರಿಂದ ವ್ಯಾಪಾರ ಉದ್ಯೋಗಗಳ ದೃಷ್ಟಿಯಿಂದ ವಿಶೇಷ ಲಾಭ ಹಾನಿಗಳಿಲ್ಲ, ಆದರೆ ಹಿಂದುಸ್ತಾನದ ರಕ್ಷಣೆಯ ದೃಷ್ಟಿಯಿಂದ ಅದಕ್ಕೆ ವಿಶೇಷ ಮಹತ್ವವಿದೆ. ಸದ್ಯದ ಪ್ರಜಾಪ್ರತಿನಿಧಿಗಳ ನಡುಗಾಲ ಸರಕಾರವು ಮುನ್ನಡೆದರೆ ಜನಮತ ಕಾಶ್ಮೀರ ಹಿಂದೀ ಒಕ್ಕೂಟಕ್ಕೆ ಸೇರುವದಕ್ಕೆ ವಿರೋಧವಾಗದೆಂದು ನಂಬಿಗೆ. ಕಾಶ್ಮೀರದ ಏಳಿಗೆಗೆ ಅಲ್ಲಿಯ ವಿದ್ಯುದಾಕರಗಳನ್ನು ಚೆನ್ನಾಗಿ ಬಳಸಿಗೊಳ್ಳುವುದು ಅವಶ್ಯಕ. ಆ ಬಗ್ಗೆ ಯಾವ ಯೋಜನೆ ತಯಾರಾಗಬೇಕಾದರೂ ಸದ್ಯದ ಅರಾಜಕ ಪರಿಸ್ಥಿತಿ ಕೊನೆಗೊಳ್ಳಬೇಕಾಗಿದೆ. ಹಿಂದೀ ಸೈನಿಕರ ಸಾಹಸದಿಂದ ಅದು ಸಿದ್ಧಿಸಬಹುದೆಂದು ಆಶಿಸಲಾಗಿದೆ.




## ವಿಭಜನೆಯ ಅಂಕೆಸಂಖ್ಯೆಗಳು

| ಅಧಿರಾಜ್ಯಗಳು | ಕ್ಷೇತ್ರ (ಚ. ಮೈಲಿನಲ್ಲಿ) | ಜನಸಂಖ್ಯೆ (ಸಾವಿರಗಟ್ಟಲೆಯಲ್ಲಿ) |
|---|---|---|
| ಹಿಂದೀ ಒಕ್ಕೂಟದಲ್ಲಿ | ೧೧,೧೯,೧೦೧ | ೨,೯೬,೫೪೬ |
| ಪಾಕಿಸ್ತಾನ | ೩,೩೩,೦೬೮ | ೬೯,[illegible] |
| ಸ್ವತಂತ್ರ ಸಂಸ್ಥಾನ | | |
| ಹೈದರಾಬಾದು | ೮೨,೩೧೩ | ೧೬,೩೩೯ |

### ವಿಭಕ್ತ ಪಂಜಾಬ

| | ಒಟ್ಟು ಜನಸಂಖ್ಯೆ | ಮುಸ್ಲಿಮರು | ಮುಸ್ಲಿಮೇತರರು |
|---|---|---|---|
| ಪಶ್ಚಿಮ ಪಂಜಾಬ | ೧೦,೯೬,೪,೨೨೮ | ೭೬,೮೭,೫೬೦ | ೩೩,೭೬,೬೬೮ |
| ಪೂರ್ವಪಂಜಾಬ | ೬೨,೮೭,೯೭೬ | ೨೭,೭೯,೭೨೯ | ೩೫,೦೮,೪೯೭ |

### ಭವಿಷ್ಯ ಸೂಚಿಗಳು

ಈಗ ವ್ಯಾಪಾರ ವಾಣಿಜ್ಯ ಕೈಗಾರಿಕೆಗಳ ಬಗ್ಗೆ ವಿಚಾರ ಮಾಡತಕ್ಕ ಮುಖ್ಯಾಂಶವೆಂದರೆ, ಸಾರಿಗೆ ಸುಂಕ, ನಾಣ್ಯ, ಕೋಶ, ಟಪ್ಪಾಲು ವ್ಯವಸ್ಥೆ ಇವುಗಳ ಇಂದಿನ ಪರಿಸ್ಥಿತಿ. ಎರಡೂ ಅಧಿರಾಜ್ಯಗಳು ಈ ವಿಷಯದಲ್ಲಿ ಯೋಜನೆಗಳಂತೆ ನಡೆಯಬೇಕಾಗಿದೆ. ಹಾಗೆ ಮಾಡಿದರೆ ಮಾತ್ರ ರಾಜ್ಯಗಳಲ್ಲಿಯ ಬಡತನಭಿಕ್ಷುಕತನಗಳು ಇಲ್ಲದಂತಾದಾವು. ಅನವಶ್ಯಕ ಪದಾರ್ಥಗಳ ಆಯಾತದ ಮೇಲೆ ಈಗಲೇ ನಿಯಂತ್ರಣ ಹಾಕಿರುವುದು ಸ್ತುತ್ಯವಾಗಿದೆ. ಅದರ ಜೊತೆಗೇ ಕೈಗಾರಿಕೆ ಮತ್ತು ನಿರ್ಯಾತ ವ್ಯಾಪಾರಗಳು ಬೇಗನೆ ಯಥಾವತ್ತಾಗಿ ವೃದ್ಧಿ ಹೊಂದುವಂತೆ ನೋಡಿಕೊಳ್ಳಬೇಕು.

### ಸೂಚನೆ

ವಾಡಿಕೆಯಂತೆ ದೀಪಾವಳಿಯ ನಿಮಿತ್ತ ಮುಂದಿನ ಅಂದರೆ ತಾ. ೨೪-೧೧-೪೭ ನೆಯ ಸಂಚಿಕೆಯು ಹೊರಡುವದಿಲ್ಲ.

ವ್ಯವಸ್ಥಾಪಕರು
ಕರ್ಮವೀರ

# ಕನ್ನಡ ನಾಡಿನ ನಿಸರ್ಗ ಸಂಪತ್ತು

ಎಚ್. ಬಿ. ಶಿವಮೊಗ್ಗಿ ವಿಜಯ ಕಾಲೇಜ ವಿಜಯಪುರ

( ವಿಜಯಪುರದ ನಾಡಹಬ್ಬದಲ್ಲಿ ಪ್ರಥಮ ಬಹುಮಾನ ಪಡೆದುದು )

ಇಂದು ಹಿಂದುಸ್ತಾನವು ಸ್ವತಂತ್ರ ದೇಶವಾಗಿದೆ. ಭಾರತದ ರಾಜಕೀಯ ಸ್ವಾತಂತ್ರ್ಯದೊಡನೆ ಅದರ ಆರ್ಥಿಕ ಸ್ವಾತಂತ್ರ್ಯವೂ ಬಂದಿರುತ್ತದೆ. ಇದರ ಸರಿಯಾದ ಮತ್ತು ಸಮಯೋಚಿತವಾದ ಲಾಭವನ್ನು ಮಾಡಿಕೊಂಡು ಹಿಂದೀ ಸರಕಾರವು ಕುಗ್ಗಿಹೋದ ಭಾರತ ಜನಾಂಗದ ಸಾರ್ವಜನಿಕ ಜೀವನಮಟ್ಟವನ್ನು ಏರಿಸಬೇಕಾಗಿದೆ. ನಮ್ಮ ನಾಡಿನ ರಾಜ್ಯಘಟನೆ ಕಾರ್ಯರೂಪಕ್ಕಿಳಿಯುವ ಕಾಲದಲ್ಲಿ ಭಾಷಾನುಗುಣ ಪ್ರಾಂತಗಳು ನಿರ್ಮಾಣವಾಗುವವೆಂದು ಎಲ್ಲೆಡೆಯಲ್ಲಿಯೂ ನಂಬಲಾಗಿದೆ. ಆ ಸಮಯದಲ್ಲಿ ಹರಿದು ಹಂಚಿಹೋದ ಕನ್ನಡ ನುಡಿಯನ್ನಾಡುವ ಜನರ ಪ್ರದೇಶಗಳನ್ನು ಒಂದುಗೂಡಿಸಿ ಅಖಂಡ ಕರ್ನಾಟಕ ಪ್ರಾಂತವು ರಚಿಸಲ್ಪಡುವದು ನಿಸ್ಸಂಶಯದ ಮಾತು. ಆದರೆ ಒಂದು ಪ್ರತ್ಯೇಕ ಪ್ರಾಂತವು ತನ್ನ ಕಾಲಮೇಲೆ ತಾನು ನಿಂತರೆ ಮಾತ್ರ ಅದಕ್ಕೆ ಏಳ್ಗೆಯು ಆತೆಯಿದೆ. ಪರರ ಮೇಲೆ ಕೈಯೂರಿ ನಿಂತ ನಾಡು ಎಂದು ನೆಲಕ್ಕುರಳುವನೋ ಹೇಳಲಿಕ್ಕಾಗದು. ಹೀಗೆ ಯಾವದಾದರೊಂದು ನಾಡು ಅಥವಾ ಪ್ರಾಂತವು ಸ್ವಾವಲಂಬಿಯಾಗಬೇಕಾದರೆ ಅದಕ್ಕೆ ನಿಸರ್ಗಸಂಪತ್ತು ಹೇರಳವಾಗಿರತಕ್ಕದ್ದು. ನಿಸರ್ಗವು ಅರ್ಥಶಾಸ್ತ್ರದ ಮೂಲಾಧಾರವೆಂದು ತಜ್ಞರು ಎಂದಿನಿಂದಲೂ ಹೇಳುತ್ತ ಬಂದಿದ್ದಾರೆ. ಈ ನಿಸರ್ಗ ಸಂಪತ್ತಿನ ಸರಿಯಾದ ಮತ್ತು ಸಂಪೂರ್ಣವಾದ ಉಪಯೋಗವನ್ನು ಮಾಡಿಕೊಂಡಲ್ಲಿ ಆಯಾ ಪ್ರಾಂತವು ಆರ್ಥಿಕ ದೃಷ್ಟಿಯಿಂದ ಉನ್ನತಿ ಹೊಂದುವದರಲ್ಲಿ ಸಂದೇಹವಿಲ್ಲ. ಆದ್ದರಿಂದ ಪ್ರತಿಯೊಬ್ಬ ಕನ್ನಡಿಗನು ನಿಸರ್ಗ ದೇವತೆಯು ಪ್ರಸನ್ನಳಾಗಿ ನಮ್ಮ ಕನ್ನಡ ನಾಡಿಗೆ ಕರುಣಿಸಿದ ಸಿರಿಯ ಅಳವನ್ನು ಅಳೆದು ಪರಿಶೀಲಿಸುವದು ಅಗತ್ಯ.

ಪ್ರಕೃತಿದೇವಿಯು ದಯಪಾಲಿಸಿದ ಪ್ರತಿಯೊಂದು ವಸ್ತುವೂ ನಿಸರ್ಗ ಸಂಪತ್ತಿನ ಒಂದು ಅಂಶವೆಂದು ಅರ್ಥಶಾಸ್ತ್ರಜ್ಞರು ಹೇಳಿದ್ದಾರೆ. ನಮ್ಮ ಲೌಕಿಕಜೀವನ ನೈಸರ್ಗಿಕ ಸಂಗತಿಗಳನ್ನು ಸಂಪೂರ್ಣವಾಗಿ ಅವಲಂಬಿಸಿರುತ್ತದೆ. ನಿಸರ್ಗ ಮುನಿದರೆ ನಮ್ಮ ಜೀವನ ಕುಗ್ಗುವದು; ಅದು ಸಂಪದ್ಯುಕ್ತವಾಗಿದ್ದರೆ ನಮ್ಮ ಜೀವನ ಹಿಗ್ಗುವದು. ಈ ರೀತಿಯಲ್ಲಿ ನಿಸರ್ಗಕ್ಕೂ ನಮ್ಮ ಜೀವನಕ್ಕೂ ನಿಕಟ ಸಂಬಂಧವಿದೆಯೆಂಬ ಮಾತನ್ನು ಜಾಣರು ಬುನಾದಿಯಿಂದಲೂ ಹೇಳುತ್ತ ಇದ್ದಾರೆ. ಒಟ್ಟಿನಲ್ಲಿ ಮಾನವಜೀವನದ ಮೇಲೆ ನಿಸರ್ಗದಿಂದ ಆಗುವ ಪ್ರತಿಯೊಂದು ಪರಿಣಾಮವೂ ನೈಸರ್ಗಿಕ ಸಂಪತ್ತಿನ ಒಂದು ಭಾಗವೆಂದೇ ಹೇಳಬಹುದು. ಆದ್ದರಿಂದ ಭೌಗೋಲಿಕ ಸ್ಥಾನ, ಭೂಮಿಯ ಗುಣ, ಹವಾಮಾನ, ಮಳೆಯ ಪ್ರಮಾಣ, ನದಿಗಳು ಮತ್ತು ಜಲಪಾತಗಳು, ಪರ್ವತ ಮತ್ತು ಅರಣ್ಯಗಳು, ಭೂಗರ್ಭ ಸಂಪತ್ತು, ಪ್ರಾಣಿ ಸಂಪತ್ತು ಮತ್ತು ಜನಬಲ ಇವೆಲ್ಲವುಗಳು ನಿಸರ್ಗ ಸಂಪತ್ತಿನ ಅಂಗಾಂಗಗಳೆಂದು ಕರೆಯಲ್ಪಡುತ್ತಿವೆ. ಈ ನೈಸರ್ಗಿಕ ಸಂಪತ್ತಿನ ಅನಕೂಲತೆಗಳು ನಮ್ಮ ಕನ್ನಡ ನಾಡಿಗೆ ಯಾವ ಬಗೆಯಲ್ಲಿ ಇರುತ್ತವೆಂಬುದನ್ನು ತಿಳಿಯುವದು ಅವಶ್ಯಕ.

## ಭೌಗೋಲಿಕ ಸ್ಥಾನ

ಕರ್ನಾಟಕ ಪ್ರಾಂತವು ಸಂಯುಕ್ತ ಭಾರತದ ಒಂದು ಅಂಗ. ಭೌಗೋಲಿಕ ದೃಷ್ಟಿಯಿಂದ ಇದು ಈಗ ಡೆಕ್ಕನ್ನ ಎಂದು ಕರೆಯಲ್ಪಡುವ ದಕ್ಷಿಣ ಹಿಂದುಸ್ತಾನದ ತಪ್ಪಲು ಪ್ರದೇಶದ ಮಧ್ಯ ಭಾಗದಲ್ಲಿ ಬರುತ್ತದೆ. ಯಾವದೇ ಒಂದು ಪ್ರದೇಶದ ಸಂಪೂರ್ಣ ಆರ್ಥಿಕ ಹಿಡಿತವು ಒಂದು ಪ್ರಾಂತದ ಕೈಸೇರಬೇಕಾದರೆ ಆ ಪ್ರಾಂತವು ಆ ಪ್ರದೇಶದ ಮಧ್ಯದಲ್ಲಿ ನೆಲೆಗೊಂಡಿರಬೇಕು. ಈ ದೃಷ್ಟಿಯಿಂದ ಕನ್ನಡ ನಾಡಿಗೆ ಬಹಳ ಅನಕೂಲತೆಯಿದೆ. ಕರ್ನಾಟಕದ ದಕ್ಷಿಣೋತ್ತರ ಅಳತೆ ೪೨೫ ಮೈಲು. ಅದರಂತೆ ಪೂರ್ವ ಪಶ್ಚಿಮ ಅಳತೆ ೩೨೫ ಮೈಲು ಆಗುತ್ತದೆ. ನಮ್ಮ ಪ್ರಾಂತವು ೭೫೫೦೦ ಚದರ ಮೈಲು ವಿಸ್ತೀರ್ಣವಿದೆ. ಇನ್ನೊಂದು ಮಹತ್ವದ ಸಂಗತಿಯೆಂದರೆ ಕನ್ನಡ ನಾಡಿಗೆ ಸುಮಾರು ೨೦೦ ಮೈಲಿನಷ್ಟು ಸಮುದ್ರಕರಾವಳಿ ಇರುತ್ತದೆ. ಆದ್ದರಿಂದ ಈ ನೈಸರ್ಗಿಕ ಅನುಕೂಲತೆಯ ಮೂಲಕ ಕರ್ನಾಟಕವು ಪರಪ್ರಾಂತ ಪರರಾಷ್ಟ್ರಗಳೊಡನೆ ಒಳದೇಶ ಮತ್ತು ಹೊರದೇಶ ವ್ಯಾಪಾರವನ್ನು ಅತಿತ್ವರೆಯಿಂದ ನಡೆಸಬಲ್ಲದು. ನಿಸರ್ಗ ದೇವಿಯು ನಮಗೆ ಭಟಕಳ, ಕಾರವಾರ, ಮಂಗಳೂರು, ಮಲ್ಪೆ ಮೊದಲಾದವುಗಳಂಥ ಸ್ವಾಭಾವಿಕ ಬಂದರುಗಳನ್ನು ಕರುಣಿಸಿರುತ್ತಾಳೆ. ಪೂರ್ವ ಕಾಲದಲ್ಲಿ ಕಾರವಾರವು ಹೆಸರಾದ ಬಂದರವಾಗಿತ್ತೆಂದು ಇತಿಹಾಸದ ಉಲ್ಲೇಖನಗಳಿಂದ ತಿಳಿಯುತ್ತದೆ. ಈ ಎಲ್ಲ ಬಂದರುಗಳ ಪುನರುಜ್ಜೀವನವಾದಲ್ಲಿ ಇಡೀ ದಕ್ಷಿಣ ಹಿಂದುಸ್ತಾನದ ಮುಖ್ಯವಾಗಿ ಡೆಕ್ಕನ್ನದ ಸಾಗರೋತ್ತರ ವ್ಯಾಪಾರವು ಕನ್ನಡಿಗರ ಕೈಯ್ಯಲ್ಲಿ ಬರುತ್ತದೆ. ಅಲ್ಲದೆ ಸಮುದ್ರ ದಂಡೆಯ ಮೇಲೆ ಮೀನು ಹಿಡಿಯುವ ಉದ್ಯೋಗಕ್ಕಾಗುವ ಅನುಕೂಲತೆಗಳಿವೆ. ಈಗ ಸದ್ಯಕ್ಕೆ ಈ ಉದ್ಯೋಗದಿಂದ ಪ್ರತಿ ವರುಷ ೮೦೦೦ ಟನ್ನ ಮೀನು ದೊರೆಯುತ್ತದೆ. ನೂತನ ಮಾದರಿಯ ಸಲಕರಣೆಗಳನ್ನು ಉಪಯೋಗಿಸಿ ಈ ಉದ್ಯೋಗವನ್ನು ಅಭಿವೃದ್ಧಿಗೊಳಿಸಿದರೆ ಇದರ ಉತ್ಪನ್ನ ೬—೭ ಪಟ್ಟು ಏರುವದೆಂದು ಹೇಳಲಾಗುವದು. ಮೀನಿನ ಉದ್ಯೋಗದಿಂದ ಕನ್ನಡ ನಾಡಿಗೆ ಗೊಬ್ಬರದ ಪೂರೈಕೆಯೂ ಆಗುತ್ತದೆ. ಹೀಗೆ ನಮ್ಮ ನಾಡು ಭೌಗೋಲಿಕ ಸ್ಥಾನದಲ್ಲಿ ಬಹಳ ಧನ್ಯವಿದೆ.

## ಹವಾಮಾನ

ಕನ್ನಡನಾಡು ಉಷ್ಣಕಟಿಬಂಧದಲ್ಲಿ ಬರುತ್ತದೆ ಆದ್ದರಿಂದ ನಮ್ಮ ಪ್ರಾಂತದಲ್ಲಿ ಸೆಕೆ ಹೆಚ್ಚು ಆದರೂ ಹವಾಮಾನದಲ್ಲಿ ವಿಶೇಷ ವಿಷಮತೆ ಕಂಡು ಬರುವದಿಲ್ಲ. ಉತ್ತರ ದಿಕ್ಕಿನ ಕರ್ನಾಟಕದ ಹವೆಯು ಸ್ವಲ್ಪ ತೇವವಿಲ್ಲದ್ದು. ಆದರೆ ದಕ್ಷಿಣಕ್ಕೆ ಹೋದಹಾಗೆ ಆರ್ದ್ರತೆ ಹೆಚ್ಚಾಗುತ್ತ ಹೋಗುತ್ತದೆ. ಮಲೆನಾಡಿನ ಸೆರಗಾದ ಧಾರವಾಡ ಮತ್ತು ಬೆಳಗಾಂವಿ ಜಿಲ್ಹೆಗಳಲ್ಲಿ ಆರ್ದ್ರತೆ ಕಂಡುಬರುತ್ತದೆ. ಆದ್ದರಿಂದ ಈ ಭಾಗಗಳಲ್ಲಿ ಬಟ್ಟೆಯನ್ನು ನೇಯುವ ಉದ್ಯೋಗವನ್ನು ಚೆನ್ನಾಗಿ ಸಾಗಿಸಬಹುದು. ಇದೇ ರೀತಿ ಕಾರವಾರದ ಹವೆಯು ರೇಶಿಮೆ ಹುಳಗಳನ್ನು ಸಾಕುವ ಉದ್ಯೋಗಕ್ಕೆ ಬಹಳ ಅನುಕೂಲವಿದೆ. ಹೀಗೆ ನಮ್ಮ ಕರ್ನಾಟಕದ ಹವಾಮಾನವು ಆರ್ಥಿಕ ಅಭಿವೃದ್ಧಿಗೆ ಅನುಕೂಲವಿರುತ್ತದೆ.

## ಭೂಮಿಯ ಗುಣ

ಕರ್ನಾಟಕ ಪ್ರಾಂತವು ಬುನಾದಿಯಿಂದಲೂ ಸಾಗುವಳಿಯ ನಾಡು. ಇಲ್ಲಿ ೧೦೦ ಕ್ಕೆ ೭೦ ರಷ್ಟು ಜನರು ಒಕ್ಕಲತನವನ್ನು ಅವಲಂಬಿಸಿರುತ್ತಾರೆ. ಇದರಿಂದ ಕನ್ನಡ ನಾಡಿನ ಭೂಮಿಯು ಫಲದ್ರೂಪವಾಗಿರಬೇಕೆಂದು ಎಲ್ಲರಿಗೂ ತಿಳಿದು ಬರಲು ಸಾಕು. ಈ ಸಂದರ್ಭದಲ್ಲಿಯೂ ನಿಸರ್ಗ ದೇವತೆಯು ನಮ್ಮ ಮೇಲೆ ಕೃಪೆ ಮಾಡಿರುವಳೆಂದು ಹೇಳಬಹುದು.

ಉತ್ತರ ಭಾಗಗಳಾದ ವಿಜಯಪುರ ಜಿಲ್ಹೆ, ನಿಜಾಮ ಕರ್ನಾಟಕ ಮತ್ತು ಮಧ್ಯದಲ್ಲಿ ಪೂರ್ವದ ಅಂಚಿಗೆ ಬರುವ ಬಳ್ಳಾರಿ ಜಿಲ್ಹೆಯ ಮಣ್ಣು ಕಪ್ಪು. ಕೆಲವು ಕಡೆಯಲ್ಲಿ ಮಸಾರಿ ಭೂಮಿಯೂ ಉಂಟು. ನದಿಗಳ ದಂಡೆಯ ಮೇಲೆ ರೇವೆ ಮಣ್ಣು ಇರುತ್ತದೆ. ಈ ಪ್ರದೇಶಗಳ ಮಣ್ಣಿನಲ್ಲಿ ಸ್ವಲ್ಪ ಮಳೆಯಾದರೂ ನೀರನ್ನು ಹಿಡಿದಿಟ್ಟುಕೊಳ್ಳುವ ಶಕ್ತಿಯಿದೆ. ಆದ್ದರಿಂದಲೆ ಸ್ವಲ್ಪೇ ಮಳೆಯು ಸರಿಯಾಗಿ ಹಂಚಿ ಸಕಾಲಕ್ಕೆ ಆದಲ್ಲಿ ಒಂದೇ ವರುಷದಲ್ಲಿ ನಾಲ್ಕು ವರುಷದ ಬೆಳೆ ಬರುತ್ತದೆಯೆಂದು ಅಲ್ಲಿಯ ರೈತರು ಹೇಳುತ್ತಾರೆ. ಈ ಭೂಮಿಯಲ್ಲಿ ಮುಖ್ಯವಾಗಿ ಜೋಳ, ಹತ್ತಿ, ಗೋದಿ, ಸಜ್ಜೆ, ಸೇಂಗಾ ಮತ್ತು ಇನ್ನಿತರ ಎಣ್ಣೆಯ ಕಾಳುಗಳು ಬೆಳೆಯುತ್ತವೆ. ಇದಲ್ಲದೆ ನದಿಗಳ ದಂಡೆಯ ಮೇಲೆ ಕಬ್ಬು ಬೆಳೆಯುವದುಂಟು. ದಕ್ಷಿಣಕ್ಕೆ ಹೋದ ಹಾಗೆ ಕೆಂಪು ಉಸುಕುಮಿಶ್ರಿತ ಮಣ್ಣು ಕಾಣುವದು. ಧಾರವಾಡ ಮತ್ತು ಬೆಳಗಾವಿಯ ಕೆಲವೊಂದು ಭಾಗಗಳಲ್ಲಿ ಕೆಂಪು ಎರೆಯೂ ಇರುತ್ತದೆ. ಇಲ್ಲಿ ಮಾವಿನ ಮರಗಳು ಚೆನ್ನಾಗಿ ಬೆಳೆಯುತ್ತವೆ. ಮಲೆನಾಡಿನ ಅಂಚಿನಲ್ಲಿ ಬರುವ ಧಾರವಾಡ-ಬೆಳಗಾವಿಯ ಮತ್ತಿತರ ಭಾಗಗಳಲ್ಲಿ ಜವಳು ಭೂಮಿಯೂ ಉಂಟು. ಇಲ್ಲಿ ಅಕ್ಕಿಯು ತೀರ ಉತ್ತಮವಾಗಿ ಬೆಳೆಯುವದು. ಕಾರವಾರದ ಪರ್ವತಪ್ರದೇಶದ ಕೊಳ್ಳದಲ್ಲಿ ಕೆಂಪು ಭೂಮಿಯು ಕಾಣುತ್ತದೆ. ಮೈಸೂರಿನ ಭೂಮಿಯು ಮಸಾರಿಯಾಗಿದ್ದು ಫಲವತ್ತಾಗಿದೆ. ಹೀಗೆ ನಮ್ಮ ಕನ್ನಡ ನಾಡಿನ ಭೂಮಿಯು ಫಲದ್ರೂಪವಾಗಿದೆ. ಇಲ್ಲಿ ಎಲ್ಲ ತರಹದ ಪೈರುಗಳನ್ನು ಬೆಳೆಯುವ ಭೂಮಿಗಳಿರುತ್ತವೆ. ಆದ್ದರಿಂದ ಕರ್ನಾಟಕವು ಆಹಾರ ಸಮಸ್ಯೆಯನ್ನು ಬಿಡಿಸುವದಕ್ಕಾಗಲೀ ಇಲ್ಲವೇ ರೊಕ್ಕದ ಪೈರುಗಳಿಗಾಗಲೀ ಪರಪ್ರಾಂತಗಳ, ಮುಖವನ್ನು ನೋಡುತ್ತ ಕೂಡ್ರಬೇಕಾಗಿಲ್ಲ.

## ಮಳೆಯ ಪ್ರಮಾಣ

ಸದ್ಯಕ್ಕೆ ಕನ್ನಡ ನಾಡು ತನ್ನ ಒಕ್ಕಲತನದ ಹೋರೆಯನ್ನು ಸಾಗಿಸಲಿಕ್ಕೆ ಮಳೆಯನ್ನೇ ಅವಲಂಬಿಸಿದೆ. ಸರಿಯಾದ ಕಾಲಕ್ಕೆ ಮಳೆಯು ಸಾಕಷ್ಟು ಬೀಳುವದರಿಂದ ಕರ್ನಾಟಕದಲ್ಲಿ ಎಲ್ಲ ತರದ ಪೈರು ಬೆಳೆಯುತ್ತವೆ. ಆದರೆ ಬಳ್ಳಾರಿ ವಿಜಯಪುರ ಜಿಲ್ಹೆಗಳಲ್ಲಿ ಮಳೆಯು ಅನಿಶ್ಚಿತವಿರುವದರಿಂದಲೂ ಅದರ ಪ್ರಮಾಣವು ಕಡಿಮೆಯಿರುವದರಿಂದಲೂ ಅಲ್ಲಿ ಮೇಲಿಂದ ಮೇಲೆ ಬರಗಾಲ ಬೀಳುತ್ತದೆ. ಆದ್ದರಿಂದ ಮಳೆಯ ದೃಷ್ಟಿಯಿಂದ ನಮ್ಮ ಕರುನಾಡಿನ ಮೇಲೆ ಪ್ರಕೃತಿ ದೇವಿಯು ಮುನಿದಿರುವಳೆಂದು ಹೇಳಬಹುದು. ಆದರೂ ಕಾರವಾರದ ಘಟ್ಟಗಳಲ್ಲಿ ಮಳೆಯ ಪ್ರಮಾಣವು ೧೦೦ ರಿಂದ ೧೫೦ ಇಂಚುಗಳ ವರೆಗೆ ಇರುತ್ತದೆ. ಬೆಳಗಾವಿ ಮತ್ತು ಧಾರವಾಡ ಜಿಲ್ಹೆಗಳಲ್ಲಿ ಏನಿಲ್ಲೆಂದರೂ ೩೫-೪೦ ಇಂಚು ಮಳೆ ಬೀಳುವದುಂಟು. ಮೈಸೂರಿಗೆ ಅಷ್ಟೊಂದು ಮಳೆಯ ಸೌಕರ್ಯವಿಲ್ಲದಿದ್ದರೂ ಅಲ್ಲಿ ನೀರಾವರಿಯನ್ನು ಮಾಡಿಕೊಂಡಿದ್ದಾರೆ. ವಿಜಯಪುರ ಜಿಲ್ಹೆಗೆ ಮಾತ್ರ ಮಳೆಯು ಸುಮಾರು ೧೫—೨೦ ಇಂಚು ಬೀಳುತ್ತದೆ. ಬಳ್ಳಾರಿಯ ಸ್ಥಿತಿಯೂ ಇದೇ.

## ನದಿಗಳು ಮತ್ತು ಜಲಪಾತಗಳು

ಕನ್ನಡ ನಾಡು ನದಿಗಳ ಬೀಡು ಎಂದು ಹೆಸರಾಗಿದೆ. ಮುಖ್ಯವಾದ ಕೃಷ್ಣಾ, ಭೀಮಾ, ತುಂಗಭದ್ರಾ, ಕಾವೇರಿ ಮತ್ತು ಹಗರೀ ನದಿಗಳಲ್ಲದೇ ಇನ್ನೂ ಅನೇಕ ಸಣ್ಣ ಸಣ್ಣ ನದಿಗಳು ನಮ್ಮ ಪ್ರಾಂತದಲ್ಲಿ ಹರಿಯುತ್ತವೆ. ಈ ಚಿಕ್ಕ ನದಿಗಳು ಗುಡ್ಡಗಳಲ್ಲಿ ಹರಿದಿರುವದರಿಂದ ಜಲಪಾತಗಳಾಗಿ ವಿದ್ಯುಚ್ಛಕ್ತಿಯನ್ನು ಹುಟ್ಟಿಸುವದಕ್ಕೆ ಬಹಳ ಅನುಕೂಲತೆಯಿದೆ. ವಿಜಯಪುರ ಒಂದೇ ಜಿಲ್ಹೆಯಲ್ಲಿ ಕೃಷ್ಣಾ, ಭೀಮಾ, ಘಟಪ್ರಭಾ, ಮಲಪ್ರಭಾ, ಮತ್ತು ಡೋಣಿ ಹಳ್ಳ ಎಂಬ ಪಂಚನದಿಗಳಿರುತ್ತವೆ. ಆದ್ದರಿಂದಲೇ ಅನೇಕರು ಈ ಜಿಲ್ಹೆಗೆ 'ಡೆಕ್ಕನ್ನನ ಪಂಜಾಬ' ಎಂದು ಸಂಬೋಧಿಸುತ್ತಾರೆ. ಆದರೆ ಈ ನದಿಗಳ ಸರಿಯಾದ ಉಪಯೋಗವನ್ನು ಮಾಡಿಕೊಂಡು ನಮ್ಮ ಆರ್ಥಿಕ ಮಟ್ಟ ಏರಿಸದೆ ಇದ್ದುದು ನಮ್ಮ ಸರಕಾರದ ತಪ್ಪು; ನಮ್ಮ ತಪ್ಪು. ನಿಸರ್ಗದೇವಿ ಮುಕ್ತಹಸ್ತದಿಂದ ನೀಡಿದ ವಸ್ತುಗಳನ್ನು ಸಂಪೂರ್ಣವಾಗಿ ಉಪಯೋಗಿಸಿಕೊಳ್ಳುವದು ನಮ್ಮೆಲ್ಲರ ಕರ್ತವ್ಯ. ಮೈಸೂರಿನಲ್ಲಿ ಕಾವೇರಿಗೆ ಕೃಷ್ಣರಾಜಸಾಗರ ಅಣೆಕಟ್ಟು ಕಟ್ಟಿ ನೀರಾವರಿ ಮಾಡಿಕೊಂಡಿದ್ದಾರೆ. ಇದರಿಂದ ಎರಡು ಲಕ್ಷ ಎಕರೆ ಭೂಮಿಯು ನೀರುಣ್ಣುತ್ತದೆ. ಇದರಂತೆ 'ಮಾರಿಕಣಿವೆ' ಎಂಬ ಕೊಳ್ಳದಲ್ಲಿ ವೇದವತಿ ನದಿಗೆ ಒಡ್ಡು ಹಾಕಿ ಸುಮಾರು ೨೫೦೦೦ ಎಕರೆ ನೀರುಣಿಸುತ್ತಾರೆ. ಕಾರವಾರದ ಶರಾವತಿ ಒಂದೇ ನದಿಗೆ ನಾಲ್ಕು ತಡಸಲುಗಳಿವೆ. ಅವುಗಳಲ್ಲಿ ಮುಖ್ಯವಾದುದು ಗೆರಸಪ್ಪೆ, ಇದರಂತೆ ಕಾಲಿಂದೀ ವಿದ್ಯುದ್ ಯೋಜನೆಯನ್ನು ಮುಂಬಯಿ ಸರಕಾರವು ಪರಿಶೀಲಿಸಹತ್ತಿದೆ. ಈ ಯೋಜನೆಯಿಂದ ೩೮ ಲಕ್ಷ ೪೩ ಸಾವಿರದಷ್ಟು ಕಿಲೊವ್ಯಾಟ ವಿದ್ಯುಚ್ಛಕ್ತಿ ಹುಟ್ಟುತ್ತದೆ. ಇದಲ್ಲದೆ ನಮ್ಮ ನಾಡಿನಲ್ಲಿ ಉಂಚಲಿ, ವಾಲಗುಳಿ, ಮಗೋಡಾ, ಗೆರಸಪ್ಪೆ; ಗೋಕಾಕ, ಗಗನಚುಕ್ಕಿ, ಭರಚುಕ್ಕಿ, ಎಂಬ ಮೊದಲಾದ ಜಲಪಾತಗಳುಂಟು. ಇವುಗಳ ಶಕ್ತಿಯನ್ನು ಸರಿಯಾಗಿ ಉಪಯೋಗಿಸಿದರೆ ಕರ್ನಾಟಕ ಪ್ರಾಂತವು ಇಡೀ ದಕ್ಷಿಣ ಹಿಂದುಸ್ತಾನಕ್ಕೆ ವಿದ್ಯುತ್ತನ್ನು ಪೂರೈಸಬಲ್ಲದು. ಗಗನಚುಕ್ಕಿ ಜಲಪಾತದಿಂದ ಮೈಸೂರು ಸಂಸ್ಥಾನವು ಈಗ ವಿದ್ಯುಚ್ಛಕ್ತಿಯನ್ನು ಹುಟ್ಟಿಸುತ್ತದೆ. ಇದರಂತೆ ಗೋಕಾಕ ತಡಸಲಿನ ಶಕ್ತಿಯನ್ನು ಅರಳೆಯ ಗಿರಣಿಗಳನ್ನು ನಡೆಯಿಸಲಿಕ್ಕೆ ಉಪಯೋಗಿಸಿಕೊಂಡಿದ್ದಾರೆ. ಮತ್ತು ಇಲ್ಲಿ ೧೪ ಹಳ್ಳಿಗಳ ಮಟ್ಟಿಗೆ ನೀರಾವರಿ ಸಾಗುತ್ತದೆ. ಒಟ್ಟಿನಲ್ಲಿ ಕರ್ನಾಟಕದ ಔದ್ಯೋಗಿಕ ಉನ್ನತಿಗೆ ನೈಸರ್ಗಿಕ ಸಾಧನವು ಹಿಂದುಸ್ತಾನದ ಬೇರೆ ಯಾವ ಪ್ರಾಂತಕ್ಕಿಂತಲೂ ಅಧಿಕವಾದದ್ದಿದೆ ಎಂದು ಅನೇಕ ಮೇಧಾವಿಗಳು ಹೇಳಿದ್ದುಂಟು.

ಕರ್ನಾಟಕದ ಕೆಲವು ನದಿಗಳು ಬೈಲುಸೀಮೆಯಲ್ಲಿ ಹರಿದಿರುವದರಿಂದ ಅವುಗಳಿಗೆ ಒಡ್ಡು ಹಾಕಿ ನೀರಾವರಿ ಮಾಡಲು ಬರುತ್ತದೆ. ಇದರಿಂದ ಪೈರಿನ ಉತ್ಪನ್ನ ಅನೇಕ ಪಟ್ಟು ಏರುವದರಲ್ಲಿ ಸಂದೇಹವಿಲ್ಲ. ಬೆಳಗಾವಿಯ ಹದಿನ ರಾಜಗೋಳಿ ಎಂಬಲ್ಲಿ ಘಟಪ್ರಭಾನದಿಗೆ ಒಡ್ಡು ಹಾಕಿ ನೀರಾವರಿ ಮಾಡುವ ಅನುಕೂಲತೆಯಿದೆ. ಇದರಂತೆ ವಿಜಯಪುರ ಜಿಲ್ಹೆಯ ಹೆರಕಲ್ ಎಂಬಲ್ಲಿ ಘಟಪ್ರಭಾನದಿಗೆ ಅಣೆಕಟ್ಟು ಕಟ್ಟಿ ನೀರಾವರಿ ಮಾಡಲು ಬರುವದು. ಇದರಿಂದ ಮೊದಲೇ ಉಳಿತಾಯದ ಪ್ರದೇಶವಾದ ಕರ್ನಾಟಕವು ಬಹಳ ಉಳಿತಾಯದ ನಾಡಾಗುತ್ತದೆ. ಇದಲ್ಲದೆ ಕನ್ನಡ ನಾಡಿನ ನದಿಗಳು ಮಹಾಪೂರ ಬಂದಾಗ ರೇವೆ ಮಣ್ಣು ತಂದು ಎಡಬಲದ ದಂಡೆಗಳ ಮೇಲೆ ಬಿಡುವವು. ಆದ್ದರಿಂದಲೇ ನಮ್ಮ ನದಿಗಳ ದಂಡೆಯ ಪ್ರದೇಶವು ಫಲವತ್ತಾಗಿದೆ. ಆದರೆ ಕರ್ನಾಟಕದ ನದಿಗಳು ಗುಡ್ಡಗಾಡು ಪ್ರದೇಶದಲ್ಲಿ ಹರಿದಿರುವದರಿಂದಲೂ ನದಿಗಳ ಪಾತ್ರವು ತೀರ ಚಿಕ್ಕದಾಗಿರುವದರಿಂದಲೂ ಇವು ಸಾರಿಗೆಯ ಕೆಲಸಕ್ಕೆ ಉಪಯೋಗ ಬೀಳುವದಿಲ್ಲ. ಈ ಮಾತನ್ನೊಂದು ಬಿಟ್ಟರೆ ನಮ್ಮ ನಾಡಿನ ನದಿಗಳ ಬಲವು ಸರಿ[illegible]ಯಿಲ್ಲದ್ದಾಗುತ್ತದೆ.

## ಪರ್ವತ ಮತ್ತು ಅರಣ್ಯ

ಕನ್ನಡ ನಾಡಿನ ನಿಸರ್ಗ ಸಂಪತ್ತಿನಲ್ಲಿ ಪರ್ವತ ಮತ್ತು ಅರಣ್ಯ ಸಂಪತ್ತು ಮುಖ್ಯವಾದದ್ದು ಮತ್ತು ಮಹತ್ವದ್ದು. ಕರ್ನಾಟಕದ ಪೂರ್ವ ಕರಾವಳಿಯನ್ನು ಸಹ್ಯಾದ್ರಿಯು ವ್ಯಾಪಿಸಿ ದಕ್ಷಿಣದಿಕ್ಕಿಗೆ ನೀಲಗಿರಿ ಪರ್ವತವಿದೆ. ಅದರಂತೆ ಆಗ್ನೇಯ ಬದಿಗೆ ಪೂರ್ವ ಘಟ್ಟದ ಕಿರಿದಾದ ಭಾಗ ಹಬ್ಬಿರುತ್ತದೆ. ಸಹ್ಯಾದ್ರಿ ಘಟ್ಟವು ನಮ್ಮ ನಾಡಿಗೆ ಮಳೆಯನ್ನು ತರುತ್ತದೆ. ಇದಲ್ಲದೆ ಸಹ್ಯಾದ್ರಿಯು ಅರಣ್ಯದ ಆಗರವಾಗಿರುತ್ತದೆ. ಕಾರವಾರ ಜಿಲ್ಹೆಯಲ್ಲಿರುವಂಥ ಸಮೃದ್ಧ ಅರಣ್ಯ ಹಿಂದುಸ್ತಾನದಲ್ಲಿ ಬೇರೊಂದಿಲ್ಲ. ಈ ಅಡವಿಯು ಸುಮಾರು ೩೫೪೪ ಚದರ ಮೈಲು ವಿಸ್ತೀರ್ಣವಿರುತ್ತದೆ. ಅಂದರೆ ಮುಂಬಯಿ ಪ್ರಾಂತದ ಅರಣ್ಯ ಸಂಪತ್ತಿನ ೧೦೦ ಕ್ಕೆ ೪೦ ರಷ್ಟು ಭಾಗ ಕಾರವಾರದಲ್ಲಿ ಬರುತ್ತದೆ. ಕರ್ನಾಟಕ ಪ್ರಾಂತದ ಭವಿತವ್ಯ ಕಾರವಾರದ ಅರಣ್ಯವನ್ನವಲಂಬಿಸಿದೆ. ಅಲ್ಲಿ ಮುಖ್ಯವಾಗಿ ತೇಗ, ಬಿದಿರು, ಗಂಧ, ಸಿಂಕೋನಾ ಎಂಬ ಮೊದಲಾದ ೨೫೦ ಜಾತಿಯ ವನಸ್ಪತಿಗಳು ಬೆಳೆಯುತ್ತವೆ. ಇದಲ್ಲದೆ ಔಷಧಕ್ಕೆ ಬೇಕಾಗುವ ವನಸ್ಪತಿಗಳು, ಸೀಗೆಕಾಯಿ, ಅಂಟು, ಗೋಡಂಬಿ ಮೆಣಸು, ಜೇನುತುಪ್ಪ, ದೊರೆಯುತ್ತವೆ. ಕಾರವಾರದ ಅಡವಿಯಲ್ಲಿ ಬಿದಿರು ಮತ್ತು ಹುಲ್ಲು ಅಧಿಕವಾಗಿ ಬೆಳೆಯುತ್ತಿರುವದರಿಂದ ಅಲ್ಲಿ ಕಾಗದ ತಯಾರಿಸುವ ಉದ್ಯೋಗಕ್ಕೆ ಎಲ್ಲ ತರದ ಸೌಕರ್ಯವಿದೆ. ಈ ಉದ್ಯೋಗದಿಂದ ಕರ್ನಾಟಕವು ಇಡೀ ದಕ್ಷಿಣ ಹಿಂದುಸ್ತಾನಕ್ಕೆ ಕಾಗದವನ್ನು ಪೂರೈಸಬಲ್ಲದು. ಇನ್ನೊಂದು ಸಂಗತಿಯೆಂದರೆ ಕಾರವಾರದ ಅರಣ್ಯದಲ್ಲಿರುವ ಆನೆಯಿಂದ ಹಸ್ತಿದಂತ ದೊರೆಯುತ್ತದೆ! ಈ ಆನೆಗಳು ಸಾರಿಗೆಯ ಕಾರ್ಯಕ್ಕೂ ಉಪಯೋಗವಾಗುವವು. ಇದಲ್ಲದೆ ನೀಲಗಿರಿ 'ಪರ್ವತದಲ್ಲಿ ಚಹಾ, ಕಾಫಿ ಮತ್ತು ಸಿಂಕೋನಾ ಬೆಳೆಯುತ್ತವೆ. ಈ ರೀತಿಯಲ್ಲಿ ಕನ್ನಡ ನಾಡಿಗೆ ಪರ್ವತ ಮತ್ತು ಅರಣ್ಯಸಂಪತ್ತಿನ ಸೌಕರ್ಯವಿದೆ.

## ಭೂಗರ್ಭ ಸಂಪತ್ತು

ಖನಿಜ ಸಂಪತ್ತಿಗೂ ನಮ್ಮ ಅಖಂಡ ಕರ್ನಾಟಕದಲ್ಲಿ ಕೊರತೆಯಿಲ್ಲ. ಅವಶ್ಯವೆನಿಸುವ ಎಲ್ಲ ಧಾತುಗಳು ಇಲ್ಲಿಯೇ ದೊರಕುತ್ತವೆ.

ಮೈಸೂರು ಸಂಸ್ಥಾನದ ಭದ್ರಾವತಿ ಎಂಬಲ್ಲಿ ಕಬ್ಬಿಣದ ಕಣಿಗಳಿರುತ್ತವೆ. ಹಿಂದುಸ್ತಾನದಲ್ಲಿ ಇವು ಎರಡನೇ ದೊಡ್ಡ ಕಣಿಗಳು. ಪ್ರತಿವರ್ಷ ಇಲ್ಲಿ ೨೦೦೦ ಟನ್ನ ಕಬ್ಬಿಣ ಸಿದ್ಧವಾಗುತ್ತದೆ. ಗದುಗು ತಾಲೂಕಿನ ಕಪ್ಪತ ಗುಡ್ಡದಲ್ಲಿ ಮ್ಯಾಂಗನೀಜಮಿಶ್ರಿತ ಕಬ್ಬಿಣ ದೊರೆಯುವದು. ಕಲಘಟಗಿ ತಾಲೂಕಿನ ಘಳಗಿ ಎಂಬಲ್ಲಿ ಮತ್ತು ಧಾರವಾಡದ ಹತ್ತಿರಿನ ತೇಗೂರಲ್ಲಿ ಕಬ್ಬಿಣ ಸಮೃದ್ಧಿಯಾಗಿ ಸಿಕ್ಕುವದೆಂದು ಹೇಳುತ್ತಾರೆ. ವಿಜಯಪುರ ಜಿಲ್ಹೆಯ ಹಾಲಗೇರಿ ಮತ್ತು ರಾಜಾಪುರಗಳಲ್ಲಿಯೂ ಹಿಂದಕ್ಕೆ ಕಬ್ಬಿಣದ ಕಣಿಗಳಿದ್ದವಂತೆ. ಕಾರವಾರ ಜಿಲ್ಹೆಯ ಹೊನ್ನಾವರದ ಹತ್ತಿರ ಇರುವ ಬಸವರಾಜದುರ್ಗ ನಡುಗಡ್ಡೆಯಲ್ಲಿ ಮೊನ್ನೆ ಮೊನ್ನೆಯ ವರೆಗೆ ಕಬ್ಬಿಣ ತೆಗೆಯುತ್ತಿದ್ದರೆಂದು ತಿಳಿದು ಬರುವದು. ಇದರಂತೆ ಸಹ್ಯಾದ್ರಿ ಘಟ್ಟದಲ್ಲಿ ಕಬ್ಬಿಣದ ಅಂಶವಿದ್ದ ಕಲ್ಲು ಹೊರಡುವದೆಂದು ಹೇಳುವರು. ಇದಲ್ಲದೆ ಗೋಕಾಕದ ಬಳಿಯಲ್ಲಿಯ ಕೊತ್ನಾಳದಲ್ಲಿ ಕಬ್ಬಿಣದ ಕಣಿಗಳಿರುತ್ತವೆ. ಬಳ್ಳಾರಿ ಜಿಲ್ಹೆಯ ಭಾಗದಲ್ಲಿಯೂ ಕಬ್ಬಿಣ ಹೊರಡುತ್ತದೆ. ಹೀಗೆ ಕರ್ನಾಟಕ ಪ್ರಾಂತದಲ್ಲಿ ಕಬ್ಬಿಣಕ್ಕೆ ಕೊರತೆಯಿಲ್ಲ.

ಮೈಸೂರಿನ ಬಂಗಾರದ ಕಣಿಗಳು ಜಗತ್ಪ್ರಸಿದ್ಧವಾಗಿವೆ. ಕೋಲಾರ ಎಂಬಲ್ಲಿಳ ಕಣಿಗಳಿರುತ್ತವೆ ಅಲ್ಲಿ ಪ್ರತಿವರುಷ ೩॥ ಕೋಟಿ ರೂಪಾಯಿ ಬೆಲೆಬಾಳುವ ಬಂಗಾರ ತೆಗೆಯುತ್ತಾರೆ. ಇದರಂತೆ

—೧೫ ನೇ ಪುಟಕ್ಕೆ

## ಕಾಶ್ಮೀರ ದಾಳಿಯ ಇತಿಶ್ರೀ

ಸರಹದ್ದ ಸರಕಾರದ ನೇತೃತ್ವದಲ್ಲಿ ಮತ್ತು ಪಾಕಿಸ್ತಾನ ಸರಕಾರದ ಪ್ರೋತ್ಸಾಹನೆಯಿಂದ ಕಾಶ್ಮೀರದ ಮೇಲೆ ನಡೆದ ದಾಳಿಯು ಯಶಸ್ವಿಯಾಗಿ ಹಿಮ್ಮೆಟ್ಟಲ್ಪಟ್ಟು ದಾಳಿಗಾರರು ಪಲಾಯನಸೂತ್ರಗಳನ್ನು ಹೇಳಹತ್ತಿರುವರು. ಪಾಕಿಸ್ತಾನ ಸರಕಾರದ ಮೇಲೆ ವಿಶ್ವಾಸವಿಟ್ಟು ಹಿಂದುಸ್ತಾನ ಸರಕಾರವು ನೆರೆಯ ಪ್ರಾಂತಗಳ ಬಗೆ ಸ್ವಲ್ಪ ಅಲಕ್ಷ್ಯವನ್ನು ತಾಳಿರುವಾಗ ಪುಂಡರ ಹಾವಳಿಯ ನೆವದಿಂದ ಸರಹದ್ದದ ಮುಸ್ಲಿಂಲೀಗಿನ ಪ್ರಮುಖರು ನಿಃಶಸ್ತ್ರ ಕಾಶ್ಮೀರಿಗಳ ಮೇಲೆ ಕ್ರೂರ ದಾಳಿಯನ್ನು ನಡೆಸಿದ್ದರು. ಕಾಶ್ಮೀರಿಗಳು ಇದನ್ನೆಲ್ಲ ಒಳ್ಳೆ ಧೈರ್ಯದಿಂದ ಎದುರಿಸಿ, ಸಹಿಸಿ ಹಿಂದುಸ್ತಾನ ಸರಕಾರದ ಸಹಾಯದಿಂದ ದಾಳಿಗಾರರನ್ನು ಓಡಿಸಿ ಬಿಟ್ಟದ್ದು ಅಭಿನಂದನೀಯವಾಗಿದೆ. ಕೈದು ಮಾಡಲ್ಪಟ್ಟ ದಾಳಿಗಾರರನ್ನು ಕೇಳಿದಾಗ ತಮ್ಮನ್ನೆಲ್ಲ ಪ್ರೋತ್ಸಾಹಿಸಿದವರು ಗಡಿನಾಡ ಮುಖ್ಯಮಂತ್ರಿಗಳೆಂದು, ತಮಗೆ ಶಸ್ತ್ರಾಸ್ತ್ರಗಳನ್ನು ಪೂರಯಿಸಿದ್ದು ಆ ಸರಕಾರವೇ ಎಂದು ಸ್ಪಷ್ಟವಾಗಿ ಹೇಳಿದರು. ಪರಿಸ್ಥಿತಿ ಹೀಗಿರುವಾಗ ಪಾಕಿಸ್ತಾನ ಸರಕಾರವು ದಾಳಿಯ ಸಂಬಂಧದಲ್ಲಿ ಇದ್ದ ತನ್ನ ಕೈವಾಡದ ಹೊಣೆಯನ್ನು ಯಾವ ರೀತಿಯಿಂದಲೂ ಹಾರಿಸಿಕೊಳ್ಳಲಾರದು. ಪಾಕಿಸ್ತಾನದ ಮುಖ್ಯಮಂತ್ರಿ ಲಿಯಾಕತ ಅಲ್ಲೀಖಾನರು ಈ ಸಂಬಂಧದಲ್ಲಿ ಪಟ್ಟ ಅಭಿಪ್ರಾಯವು ಅಪಪ್ರಚಾರದ ಕಂತೆಯಾಗಿದ್ದು ಅದಕ್ಕೆ ಸರದಾರ ವಲ್ಲಭಭಾಯಿ ಪಟೇಲರು ಸ್ಪಷ್ಟ ಉತ್ತರ ಕೊಟ್ಟಿದ್ದಾರೆ. ಹಿಂದುಸ್ತಾನ ಸರಕಾರ ಈಗ ಕಾಶ್ಮೀರನ್ನು ದಾಳಿಗಾರರಿಂದ ಮುಕ್ತ ಮಾಡಿದ್ದರೂ ಅದರ ಭವಿತವ್ಯದ ನಿರ್ಣಯವನ್ನು ಅಲ್ಲಿನ ಜನರಿಗೆ ಬಿಟ್ಟುಗೊಟ್ಟಿದೆ. ಅಲ್ಲಿನ ಪ್ರಜೆಗಳ ಅಭಿಪ್ರಾಯದಂತೆಯೆ ಅದು ಯಾವದೊಂದು ವಸಾಹತನ್ನು ಸೇರಬಲ್ಲದೆಂದು ಸಾರಲಾಗಿದೆ. ಕಾಶ್ಮೀರ ಮುಖ್ಯಮಂತ್ರಿ ಶೇಖ ಅಬ್ದುಲ್ಲಾ ರವರೂ ಇದೇ ರೀತಿ ಘೋಷಿಸಿದ್ದಾರೆ. ಪಾಕಿಸ್ತಾನ ಸರಕಾರವು ಕಾಶ್ಮೀರದಲ್ಲಿ ನಡೆಸಿದ ಕೃಷ್ಣ ಕಾರಸ್ಥಾನದ ಬಗ್ಗೆ ಯಾವಾಗಲಾದರೂ ಪ್ರಾಯಶ್ಚಿತ್ತವನ್ನು ತೆಗೆದುಕೊಳ್ಳಬೇಕಾಗುವುದೆಂಬಲ್ಲಿ ಸಂಶಯವಿಲ್ಲ.

## ಮುಖ್ಯ ಮಂತ್ರಿಗಳ ಆಶ್ವಾಸನ

ಕ್ರೂರ ದಾಳಿ, ಹಿಂಸೆ, ಅತ್ಯಾಚಾರಗಳಿಂದ ಕಾಶ್ಮೀರವನ್ನು ಸಂರಕ್ಷಿಸಿದ ಹಿಂದುಸ್ತಾನ ಸರಕಾರದ ಮುಖ್ಯ ಮಂತ್ರಿಗಳಾದ ಪಂಡಿತ ಜವಾಹರಲಾಲ ನೆಹರು ಇವರು ಹತ್ತನೆಯ ತಾರೀಕಿಗೆ ಕಾಶ್ಮೀರವನ್ನು ಸಂದರ್ಶಿಸಿದಾಗ ಸಂಭ್ರಮದ ಸ್ವಾಗತವನ್ನು ಅವರಿಗೆ ಮಾಡಲಾಯಿತು. 'ಹಿಂದಿನಂತೆ ಇನ್ನು ಮುಂದೆಯೂ ಹಿಂದುಸ್ತಾನ ಮತ್ತು ಕಾಶ್ಮೀರಗಳು ಕೂಡಿಯೆ ಇದ್ದು ಏರಿ ಬರುವ ವೈರಿಯನ್ನು ಕೂಡಿಯೇ ಎದುರಿಸುವವು, ಎಂಬುದಾಗಿ ಪಂಡಿತ ಜವಾಹರಲಾಲರು ಪ್ರಚಂಡ ಜನಸಮುದಾಯದ ಎದುರು 'ಕಾಶ್ಮೀರದ ಸಿಂಹ' ಕ್ಕೆ ಆಶ್ವಾಸನವೀಯುವಾಗ ನೆರೆದ ಜನಸಮುದಾಯ ಪ್ರಚಂಡ ಕರತಾಡನದಿಂದ ಅದನ್ನು ಸ್ವಾಗತಿಸಿತು. ಸಹಾಯದ ಈ ಆಶ್ವಾಸನದ ಹಸ್ತವನ್ನು ಕಾಶ್ಮೀರದ ಮುಖ್ಯ ಮಂತ್ರಿ ಶೇಖ ಅಬ್ದುಲ್ಲಾರವರು ಹಿಡಿದು ಒಳ್ಳೆ ಸಂತೋಷದಿಂದ ಅದನ್ನು ಕುಲುಕಿದರು. ಜನಸ್ತೋಮವು ಪ್ರಚಂಡ ಜಯಘೋಷವನ್ನು ಮಾಡಿತು. ಕಾಶ್ಮೀರಕ್ಕೆ ಬೇಕಾದ ಅವಶ್ಯಕ ವಸ್ತುಗಳಾದ ಬಟ್ಟೆ ಆಹಾರ ಮೊದಲಾದವುಗಳನ್ನು ಕೊಡುವ ವಚನವನ್ನೂ ಪಂಡಿತರು ಕೊಟ್ಟರು. ಶೇಖ ಅಬ್ದುಲ್ಲಾ ಇವರು ನಾಲ್ವತ್ತು ಲಕ್ಷ ಕಾಶ್ಮೀರಿಗಳ ಪರವಾಗಿ ಪಂಡಿತ ಜವಾಹರಲಾಲರನ್ನು ಅಭಿನಂದಿಸುತ್ತ ಕಾಶ್ಮೀರ ಹಿಂದುಸ್ತಾನಗಳು ಮಿತ್ರಭಾವದಿಂದ ಇದ್ದು ಪರಸ್ಪರರಿಗೆ ಕೊನೆಯ ವರೆಗೆ ಸಹಾಯವನ್ನು ಸಲ್ಲಿಸುವಂತಾಗಲೆಂದೂ ಹಾರಯಿಸಿದರು. ಹಿಂದುಸ್ತಾನದ ನಂದನವನದಂತಿರುವ ಕಾಶ್ಮೀರದ ನಿಸರ್ಗ ಸಂಪತ್ತನ್ನು ದಾಳಿಗಾರರ ಪುಂಡಾಟಿಕೆಯಿಂದ ಉಳಿಸಿದ್ದಕ್ಕಾಗಿ ಕಾಶ್ಮೀರವಾಸಿಗಳು ಕೊನೆಯ ವರೆಗೆ ಹಿಂದುಸ್ತಾನ ಸರಕಾರಕ್ಕೆ ಋಣಿಯಾಗುಳಿಯದಿರಲಾರರು. ಯಾವುದೊಂದು ಪ್ರಶ್ನೆಯ ಇತ್ಯರ್ಥ ಮಾಡುವಾಗ ದಾಳಿ, ದಬ್ಬಾಳಿಕೆ, ಹಿಂಸೆ, ಒತ್ತಾಯ ಮೊದಲಾದವು ಸಾಧನಗಳಾಗಿರದೆ ಪ್ರಜಾಭಿಪ್ರಾಯ, ಸ್ನೇಹ,ಸೌಹಾರ್ದ, ಅಹಿಂಸೆ ಮೊದಲಾದವುಗಳನ್ನೇ ಉಪಯೋಗಿಸತಕ್ಕದ್ದು. ಅದರಿಂದಲೆ ಕೊನೆಯ ವರೆಗೆ ಶಾಂತಿ ಸಮೃದ್ಧಿ ನಲಿದಾಡಬಲ್ಲುದು.

## ಜುನಾಗಡದ ಶರಣಾಗತಿ

ಪ್ರಜೆಗಳ ಅಭಿಪ್ರಾಯವನ್ನು ತೆಗೆದುಕೊಳ್ಳದೆ ಜುನಾಗಡದ ನವಾಬಸಾಹೇಬರು ಮತ್ತು ಅವರ ದಿವಾಣರು ಆ ಸಂಸ್ಥಾನವನ್ನು ಪಾಕಿಸ್ತಾನಕ್ಕೆ

# ಸಂಪಾದಕೀಯ ಟೀಕೆಟಿಪ್ಪಣಿಗಳು

ಸೇರಿಸಿಬಿಟ್ಟರು. ಇದರಿಂದ ತಮ್ಮ ಹೋಳಿಗೆ ತುಪ್ಪದಲ್ಲಿ ಬೀಳುವದೆಂದು ಅವರು ಬಗೆದರು. ಆದರೆ ಅಲ್ಲಿನ ಪ್ರಜೆಗಳು ಇದರ ವಿರುದ್ಧ ಬಂಡಾಯ ಹೂಡಿ ಪ್ರಜಾಸಂಘದ ಮುಖಾಂತರ ತಮ್ಮ ಧ್ಯೇಯವನ್ನು ಸಾಧಿಸಿಕೊಂಡರು. ಪ್ರಜಾಸಂಘವು ತಮ್ಮ ಧುರೀಣರಾದ ಶ್ರೀ ಶ್ಯಾಮಲದಾಸ ಗಾಂಧಿಯವರ ನೇತೃತ್ವದಲ್ಲಿ ಜುನಾಗಡದಲ್ಲಿಯ ಒಂದೊಂದೇ ಹಳ್ಳಿಯನ್ನು ವಶಪಡಿಸಿಕೊಳ್ಳುತ್ತ ನಡೆದು ಆಡಳಿತ ಸಾಗಿಸುವುದನ್ನೆ ಅಶಕ್ಯಮಾಡಿಬಿಟ್ಟಿತು ಇದರಿಂದ ನವಾಬರು ಮತ್ತು ದಿವಾಣರು ಹಿಂದುಸ್ತಾನ ಸರಕಾರಕ್ಕೆ ಶರಣುಬರಬೇಕಾಯಿತು. ಪ್ರಜೆಗಳಿಗೆ ಹೆಚ್ಚು ಹಿಂಸೆ, ಹಾನಿಯಾಗಬಾರದೆಂದು ಆಡಳಿತನನ್ನು ಹಿಂದುಸ್ತಾನ ಸರಕಾರಕ್ಕೆ ಒಪ್ಪಿಸಿ ಕೊಡುವುದಾಗಿ ನವಾಬರು, ದಿವಾಣರು ಸಾರಿರುವರು. ಅವರ ಬಿನ್ನಹದಂತೆ ಹಿಂದುಸ್ತಾನ ಸರಕಾರವೀಗ ಜುನಾಗಡದ ಆಡಳಿತವನ್ನು ವಹಿಸಿಕೊಂಡಿದೆ. ಪ್ರತಿ ಸರಕಾರದ ಮುಖಾಂತರ ಸಂಸ್ಥಾನವನ್ನು ಹಿಂದುಸ್ತಾನ ಸರಕಾರದ ಆಡಳಿತಕ್ಕೊಪ್ಪಿಸುವದಕ್ಕಿಂತ ಪ್ರಾದೇಶಿಕ ಕಮೀಶನರರ ಮುಖಾಂತರ ಹಾಗೆ ಮಾಡಬೇಕೆಂದು ಜುನಾಗಡ ಸರಕಾರವು ಕರೆದ ಸಾರ್ವಜನಿಕ ಸಭೆಯ ಅಭಿಪ್ರಾಯದಂತೆ ಆಡಳಿತವನ್ನು ಹಿಂದುಸ್ತಾನ ಸರಕಾರಕ್ಕೆ ಒಪ್ಪಿಸಿಕೊಡಲಾಗಿದೆ. ಹಿಂದುಸ್ತಾನದ ಸೈನಿಕರು ಜುನಾಗಡವನ್ನು ಪ್ರವೇಶಿಸಿ ಆಡಳಿತವನ್ನು ವಹಿಸಿಕೊಂಡಿರುವರು. ಹಿಂದುಸ್ತಾನ ಸರಕಾರಕ್ಕೆ ಆಡಳಿತವನ್ನು ಒಪ್ಪಿಸಿಕೊಟ್ಟಿದ್ದರೂ ಜುನಾಗಡವು ಪಾಕಿಸ್ತಾನದಲ್ಲಿಯೇ ಇದೆಯೆಂದು ನವಾಬರು ಮತ್ತು ದಿವಾಣರು ಹೇಳಿದ್ದಾರೆ. ಪ್ರಜೆಗಳ ಅಭಿಪ್ರಾಯದಿಂದಲೇ ಈ ವಿಷಯವನ್ನು ನಿರ್ಧರಿಸಬೇಕಾಗಿದೆಯಲ್ಲದೆ ಬರಿ ನವಾಬರಾಗಲಿ ದಿವಾಣರಾಗಲಿ ಇದರ ಇತ್ಯರ್ಥ ಮಾಡಲಾರದೆಂಬುದು ಸ್ಪಷ್ಟವಿದೆ.

## ಪೊಳ್ಳು ಪ್ರತಿಭಟನೆ

ಪಾಕಿಸ್ತಾನ ಸರಕಾರವು ಈ ಸಂಬಂಧದಲ್ಲಿ ಹದಿನೈದುನೂರು ಶಬ್ದಗಳ ಒಂದು ಪ್ರಕಟನೆಯನ್ನು ಹೊರಡಿಸಿ ಹಿಂದುಸ್ತಾನ ಸರಕಾರವು ಜುನಾಗಡವನ್ನು ಪ್ರವೇಶಿಸಿ ಆಡಳಿತವನ್ನು ವಹಿಸಿಕೊಂಡಿದ್ದು ಆಕ್ರಮಣವೆಂದೂ ಅಂತರ್‌ರಾಷ್ಟ್ರೀಯ ಕಾನೂನಭಂಗವೆಂದೂ ಮುಂತಾಗಿ ಸಾರಿದೆ. ಅಲ್ಲದೆ ಹಿಂದುಸ್ತಾನ ಸರಕಾರಕ್ಕೆ ಒಂದು ಪ್ರತಿಭಟನಾಪತ್ರವನ್ನು ಬರೆದಿದೆಯೆಂದು ಪ್ರಸಿದ್ಧವಾಗಿದೆ. ಹಿಂದುಸ್ತಾನ ಸರಕಾರವು ಕೂಡಲೆ ತನ್ನ ಸೈನ್ಯವನ್ನು ಜುನಾಗಡದಿಂದ ಹಿಂತೆಗೆದುಕೊಳ್ಳಬೇಕು, ಸಂಸ್ಥಾನದ ಆಡಳಿತವನ್ನು ಯೋಗ್ಯ ಹಕ್ಕುಬಾಧ್ಯತೆಗಳಿದ್ದ ಸರಕಾರಕ್ಕೊಪ್ಪಿಸಬೇಕು, ಒಕ್ಕೂಟದ ಜನರು ಸಂಸ್ಥಾನದ ಮೇಲೆ ನಡೆಯಿಸಿದ ದಾಳಿಯ ಹಿಂಸೆಯನ್ನು ಕೂಡಲೆ ತಡೆಯಬೇಕು ಎಂದೂ ಸೂಚಿಸಿದೆ. ಹಿಂದುಸ್ತಾನ ಸರಕಾರವು ಜುನಾಗಡದಿಂದ ಮೊದಲು ತನ್ನ ಸೈನ್ಯವನ್ನು ಹಿಂದೆ ಕರೆಯಿಸಿಕೊಂಡು ನವಾಬರ ವಶಕ್ಕೆ ಆಡಳಿತವನ್ನು ಒಪ್ಪಿಸಿಕೊಡಬೇಕು, ಇದಾಗದೆ ವಸಾಹತು ಸರಕಾರಗಳ ಪ್ರತಿನಿಧಿಗಳು ಒಂದುಕಡೆ ಸೇರಿ ಚರ್ಚೆ ನಡೆಸುವದರಲ್ಲಿ ಅರ್ಥವಿಲ್ಲ ಎಂದು ಮುಂತಾಗಿಯೂ ಪಾಕಿಸ್ತಾನ ಸರಕಾರ ಈ ಪತ್ರದಲ್ಲಿ ಬರೆದಿದೆಯಂತೆ. ಪಾಕಿಸ್ತಾನದ ಈ ಪ್ರತಿಭಟನೆ ಎಷ್ಟು ಜೊಳ್ಳು ಪೊಳ್ಳು, ಅಸಮರ್ಥನೀಯ, ದುರ್ಬಲವಾಗಿದೆಯೆಂಬದು ಯಾರಿಗಾದರೂ ಒಪ್ಪಿಗೆಯಾಗದಿರದು. ಹಿಂದುಸ್ತಾನ ಸರಕಾರವೇನು ತಾನಾಗಿಯೇ ಜುನಾಗಡಕ್ಕೆ ಹೋಗಿ ಆಡಳಿತನನ್ನು ಒಪ್ಪಿಸಿಕೊಂಡಿಲ್ಲ. ನವಾಬರ ಮತ್ತು ದಿವಾಣರ ಬಿನ್ನಹದ ಮೇರೆಗೇ ಹಾಗೆ ಮಾಡಿದೆ 'ದೇಶದಲ್ಲಿ ನಮ್ಮಿಂದ ಶಾಂತಿ ಸುವ್ಯವಸ್ಥೆಯನ್ನಿಡುವದಾಗಲಿಲ್ಲ ದಯವಿಟ್ಟು ಆಡಳಿತವನ್ನು ವಹಿಸಿಕೊಂಡು ಶಾಂತಿ, ಸುವ್ಯವಸ್ಥೆ ನೆಲೆಗೊಳಿಸಿರಿ ಎಂದು ಜುನಾಗಡ ನವಾಬರು ಮತ್ತು ದಿವಾಣರು ಕೇಳಿಕೊಂಡದ್ದರಿಂದಲೆ ಹಾಗೆ ಮಾಡಲಾಯಿತು. ಇದರಲ್ಲಿ ಆಕ್ರಮಣವೆಂತೋ? ಅಂತರ್‌ರಾಷ್ಟ್ರೀಯ ಕಾನೂನಭಂಗವೆಂತೊ? ಆಡಳಿತವನ್ನು ಹಿಂದುಸ್ತಾನ ಸರಕಾರಕ್ಕೆ ಒಪ್ಪಿಸಿ ಕೊಟ್ಟಿದ್ದರೂ ಆ ಸಂಸ್ಥಾನವಿನ್ನೂ ಪಾಕಿಸ್ತಾನದಲ್ಲಿಯೆ ಇದೆಯೆಂದೂ ಹಿಂದುಸ್ತಾನ ಸರಕಾರದಗೂಡ ತಾತ್ಪೂರ್ತಿಕ ಇಲ್ಲವೆ ನಿರಂತರ ಒಪ್ಪಂದ ಮಾಡಿಕೊಂಡರಾಗಲಿಲ್ಲೆಂದೂ ಮುಂತಾಗಿ ನವಾಬರು ಸಾರಿದ್ದಾರೆ. ಪ್ರಜೆಗಳ ಅಭಿಪ್ರಾಯವನ್ನು ತೆಗೆದುಕೊಂಡು ಆ ಪ್ರಶ್ನೆಯನ್ನು ನಿರ್ಣಯಿಸಲು ಅವರು ಸಮರ್ಥರಿರುವರು. ಪರಿಸ್ಥಿತಿ ಹೀಗಿರುವಾಗ ಪಾಕಿಸ್ತಾನ ಸರಕಾರವು ಜೊಳ್ಳು ದುರ್ಬಲ ಪ್ರಕಟನೆಗಳನ್ನು ಹೊರಡಿಸಿ ನಿರರ್ಥಕ ತಿಕ್ಕಾಟಕ್ಕೆ ಅವಕಾಶವುಂಟು ಮಾಡುವುದು ಯಾವ ರೀತಿಯಿಂದಲೂ ನ್ಯಾಯ್ಯ ಮತ್ತು ಸಮರ್ಥನೀಯವಾಗಲಾರದು.

## ಹೈದರಾಬಾದಿಗೆ ಸ್ಪಷ್ಟ ಸೂಚನೆ

ಹೈದರಾಬಾದದ ನಿಜಾಮ ಸಾಹೇಬರು ಪ್ರಜೆಗಳಿಗೆ ಹೊಣೆಗಾರ ಸರಕಾರವನ್ನು ಒಪ್ಪಿಸಿಕೊಡುವಲ್ಲಿ ಮತ್ತು ಹಿಂದೀ ಒಕ್ಕೂಟ ಸರಕಾರವನ್ನು ಸೇರುವಲ್ಲಿ ಕಾಲವಿಲಂಬ ಧೋರಣವನ್ನು ವಹಿಸುತ್ತ ನಡೆದಿರುವುದು ಯಾವ ಬಗೆಯಿಂದಲೂ ಕ್ಷೇಮಕರವಲ್ಲ. ಹಿಂದುಸ್ತಾನ ಸರಕಾರದೊಡನೆ ನಡೆಯಿಸಿದ ಸಂಧಾನದ ಮಾತುಗಳು ಮತ್ತೆ ಅಯಶಸ್ವಿಯಾದವೆಂದು ತಿಳಿದು ಬಂದಿದೆ. ಈ ಮಾತುಕತೆಗಳ ವಿಷಯವು ದೊಡ್ಡ ಗ್ರಂಥದಷ್ಟು ವಿಸ್ತಾರವಾಗಿದೆಯೆಂದು ಹೇಳಿದರೆ ತಪ್ಪಾಗದು. ದಿಲ್ಲಿಗೆ ಹೈದರಾಬಾದ ಶಿಷ್ಟಮಂಡಳ ಹೋಗಿ ಬಂದುದರ ವೆಚ್ಚವು ಸಾವಿರಗಟ್ಟಲೆ ಆಗಿರಬಹುದು. ಆದರೆ ಈ ವರೆಗೆ ಯಾವುದೊಂದು ನಿರ್ಧಾರವಾಗಲೊಲ್ಲದು. ಇದಕ್ಕಾಗಿ ಛತ್ತಾರಿ ನವಾಬರೂ ಮತ್ತು ರಾಜಕೀಯ ಸಲಹೆಗಾರರೂ ರಾಜೀನಾಮೆ ಕೂಡ ಕೊಡಬೇಕಾಯಿತು. ಇತ್ತೇಹಾದುಲ್‌ದಂಥ ಜಾತ್ಯಂಧ ಪ್ರತಿಗಾಮಿ ಸಂಸ್ಥೆಯ ಬಲೆಯಲ್ಲಿ ಸಿಕ್ಕುಬಿದ್ದ ನಿಜಾಮರಿಗೆ ಹಿಂದುಸ್ತಾನ ಸರಕಾರದ ಸೂಚನೆಯಿಂದ ದಿಗಿಲು ಬಿದ್ದಂತಾಗಿದೆಯಂತೆ. ಮೊದಲು ಸಂಸ್ಥಾನದಲ್ಲಿ ಹೊಣೆಗಾರ ರಾಜ್ಯವನ್ನು ಪ್ರಸ್ಥಾಪಿಸಿ ಆ ಬಳಿಕ ನಮ್ಮೊಡನೆ ಸಂಧಾನದ ಮಾತುಗಳನ್ನು ನಡೆಯಿಸಿರಿ ಎಂದು ಹಿಂದುಸ್ತಾನ ಸರಕಾರ ಸ್ಪಷ್ಟವಾಗಿ ಸೂಚಿಸಿದೆಯಂತೆ. ಹೊಣೆಗಾರ ರಾಜ್ಯಸ್ಥಾಪನೆಯ ಸೂಚನೆಗೆ ಹಿಂದುಸ್ತಾನ ಸರಕಾರ ಮಹತ್ವಕೊಟ್ಟಿರುವಾಗ ನಿಜಾಮ ಸರಕಾರವಿನ್ನೂ ತನ್ನ ಸಾರ್ವಭೌಮಾಧಿಕಾರದ ಕಲ್ಪನಾ ಸಾಮ್ರಾಜ್ಯದಲ್ಲಿ ನಲಿಯುತ್ತಿದೆಯೆಂದು ತಿಳಿಯುತ್ತದೆ. ಮಂತ್ರಿಮಂಡಳದ ಸಭೆ ಒಂದೇ ಸವನೆ ಕೂಡುತಿದ್ದು ಹಿಂದುಸ್ತಾನ ಸರಕಾರದ ಸೂಚನೆಯ ಬಗ್ಗೆ ಇನ್ನೂ ಯಾವುದೊಂದು ನಿರ್ಧಾರಕ್ಕೆ ಬಾರದಂತಹ ಪರಿಸ್ಥಿತಿ ಪ್ರಾಪ್ತವಾಗಿದೆಯೆಂದು ತಿಳಿಯುತ್ತದೆ. ಈ ರೀತಿ ಸಂಧಾನದ ಮಾತುಕತೆಯನ್ನು ನಡೆಯಿಸಿರುವಾಗಲೆ ನಿಜಾಮ ಸರಕಾರವು ಸಂಸ್ಥಾನದಲ್ಲಿ ಕ್ರೂರ ದಬ್ಬಾಳಿಕೆಯನ್ನು ನಡೆಸಿದೆ. ಪುಂಡರ ಪುಂಡಾಟಿಕೆಗೂ ತಡೆಯಿಲ್ಲ. ಹೀಗಾಗಿ ಪ್ರಜೆಗಳ ಗೋಳು ಕೇಳುವವರೇ ಇಲ್ಲ. ದಿನವೂ ಬರುತಿರುವ ಹಿಂಸೆ ಅತ್ಯಾಚಾರದ ಸುದ್ದಿಗಳನ್ನು ನೋಡಿದರೆ ಎಂಥ ಕಲ್ಲೆದೆಯವನ ಮನಸ್ಸೂ ಕರಗದಿರದು. ಆದರೆ ಸರಕಾರ ಅತ್ತ ಗಮನಿಸಲೊಲ್ಲದು. ಈ ಬಗೆಯ ಧೋರಣದಿಂದ ಹೈದರಾಬಾದ ಅಭಿವೃದ್ಧಿಯೆಂದಿಗೂ ಆಗದು. ಆದುದರಿಂದ ನಿಜಾಮ ಪ್ರಭುಗಳು ತಮ್ಮ ಧೋರಣವನ್ನು ಬದಲಿಸಿ ಹಿಂದುಸ್ತಾನ ಸರಕಾರ ಸೂಚಿಸಿದಂತೆ ಪ್ರಜೆಗಳಿಗೆ ಹೊಣೆಗಾರ ಸರಕಾರವನ್ನು ಕೊಟ್ಟು ಹಿಂದುಸ್ತಾನ ಸರಕಾರದಗೂಡ ಸಂಧಾನಕ್ಕೆ ಅನುಕೂಲವಾಗುವ ರೀತಿಯಲ್ಲಿ ಒಡಂಬಡಿಕೆ ಮಾಡಿಕೊಂಡು ಬಿಕ್ಕಟ್ಟನ್ನು ಬಿಡಿಸಬೇಕೆಂದು ಆಗ್ರಹಪಡಿಸುತ್ತೇವೆ.

## ಬಂದರದ ಲಾಲಸೆ

ತಮ್ಮ ಸಂಸ್ಥಾನದ ಭವಿತವ್ಯವನ್ನು ನಿರ್ಣಯಿಸಿಕೊಳ್ಳುವುದಿನ್ನೂ ಸಾಧ್ಯವಾಗದಿರುವಾಗ ನಿಜಾಮ ಸಾಹೇಬರು ಗೋವೆಯ ಸಲುವಾಗಿ ಪೋರ್ತುಗೀಜ ಸರಕಾರದೊಡನೆ ಮಾತುಕತೆ ನಡೆಸಿರುವರೆಂದು ತಿಳಿಯುತ್ತದೆ. ಬಂದರವಿಲ್ಲದ್ದಕ್ಕಾಗಿ ಹಿಂದುಸ್ತಾನ ಸರಕಾರವನ್ನು ಬಹಳ ಮಟ್ಟಿಗೆ ಅವಲಂಬಿಸಬೇಕಾಗುವುದಾದ್ದರಿಂದ ಗೋವೆಯನ್ನು ಪಡೆದುಕೊಂಡರೆ ಯಾರ ಪರಿವೆಯಿಲ್ಲದೆಯೇ ತಮ್ಮ ಕೈವಾಡವನ್ನು ನಡೆಯಿಸಲು ಸಾಧ್ಯವಾಗಬಲ್ಲದೆಂದು ಅವರ ಹವಣಿಕೆಯಿದ್ದಂತೆ ತೋರುತ್ತದೆ. ಲಂಡನದಲ್ಲಿರುವ ನಿಜಾಮರ ಏಜಂಟ ಜನರಲ್‌ರಾದ ಮೀರ ನವಾಜ ಜಂಗರವರು ಪೋರ್ತುಗೀಜ ರಾಯಭಾರಿಯೊಡನೆ ಮಾತುಕತೆ ನಡೆಯಿಸಿವಾಗ ನೇರವಾಗಿ ಪೋರ್ತುಗೀಜ ಸರಕಾರದ ಗೂಡವೆ ವಿಚಾರವಿನಿಮಯ ನಡೆಸಿರೆಂದು ತಿಳಿಸಿದರಂತೆ. ಮೀರ ನವಾಜಜಂಗರು ಅಲೆಕ್ಸಾಂಡರ ರೋಜರರನ್ನು ಈ ಸಂಧಾನದ ಮಾತುಕತೆಗಾಗಿ ಲಿಸ್ಬನ್ನಿಗೆ ಕಳಿಸಿದ್ದು ಸಂಧಾನ ಯಶಸ್ವಿಯಾಗಿ ಸಾಗಿದೆಯೆಂದೂ ತಿಳಿಯುತ್ತದೆ. ಗೋವೆಯನ್ನು ಪೋರ್ತುಗೀಜರಿಂದ ಪಡೆದುಕೊಂಡು ಅಲ್ಲಿಂದ ನೇರವಾಗಿ ಹೈದರಾಬಾದ ಸಂಸ್ಥಾನಕ್ಕೆ ರೇಲ ಸಂಬಂಧವನ್ನಿಟ್ಟುಕೊಂಡರೆ ಎಲ್ಲವೂ ಸರಾಗವಾಗಿ ಸಾಗಬಹುದೆಂದು ನಿಜಾಮರು ಭಾವಿಸಿದ್ದಾರೆ. ಸ್ವಾತಂತ್ರ್ಯಕ್ಕಾಗಿ ಸಾಹಸಪಡುತಿರುವ ಗೋವೆಯ ಪ್ರಜೆಗಳು ಹೈದರಾಬಾದದಲ್ಲಿ ಸಮಾವೇಶ ಹೊಂದಲು ಎಷ್ಟರ ಮಟ್ಟಿಗೆ ಸಿದ್ಧರಾಗುವರೋ ನೋಡಬೇಕಾಗಿದೆ. ಪ್ರಜೆಗಳ ಅಭಿಪ್ರಾಯವನ್ನು ಧಿಕ್ಕರಿಸಿ ಪೋರ್ತುಗೀಜರು ಗೋವೆಯನ್ನು ನಿಜಾಮರಿಗೆ ಮಾರಿದ್ದಾದರೆ, ಯಾವದೇ ಆಸೆಆಕಾಂಕ್ಷೆಯನ್ನಿಟ್ಟುಕೊಂಡು ಹೈದ್ರಾಬಾದ ಸರಕಾರವು ಅದನ್ನು ಕೊಂಡುಕೊಂಡದ್ದಾದರೆ ತಿಕ್ಕಾಟವು ಖಂಡಿತ. ಸದ್ಯದ ತಿಕ್ಕಾಟವನ್ನೆ ಇನ್ನೂ ಬಗೆಹರಿಸದಿರುವಾಗ ನಿಜಾಮ ಸರಕಾರದವರು ಹೊಸ ತಿಕ್ಕಾಟಕ್ಕೆ ಅವಕಾಶವನ್ನು ಕಲ್ಪಿಸಿಕೊಳ್ಳುವುದು ಯಾವ ರೀತಿಯಿಂದಲೂ ಜಾಣತನದ್ದಾಗಲಾರದು. ಪೋರ್ತುಗೀಜ ಸರಕಾರವು ಈ ಸಂಬಂಧದಲ್ಲಿ ಹೆಚ್ಚು ವಿಚಾರ ಮಾಡಬೇಕೆಂದು ಸೂಚಿಸದಿರಲಾರೆವು.

## ಮುಸಲ್ಮಾನರ ಧೋರಣವೇನು ?

ಹಿಂದುಸ್ತಾನದಲ್ಲಿಯ ಮುಸಲ್ಮಾನರ ಧೋರಣವೇನಿರಬೇಕೆಂಬುದನ್ನು ನಿರ್ಣಯಿಸಿಕೊಳ್ಳುವ ಸಮಯವೀಗ ಬಂದಿದೆ. ಪಾಕಿಸ್ತಾನದ ಪ್ರಚಾರ ನಡೆಸುವಾಗ ಹಿಂದುಸ್ತಾನದಲ್ಲಿಯ ಮುಸಲ್ಮಾನರು ಸ್ವರಾಜ್ಯ ಗಳಿಸುವೆವೆಂದು ಮನಬಂದಂತೆ ಕುಣಿದರು. ಮಾತೃಭೂಮಿಯ ದ್ರೋಹ ಮಾಡಿದರು. ಆದರೀಗ ಪಾಕಿಸ್ತಾನ ಸರಕಾರವು ಅವರ ಕೈಬಿಟ್ಟದ್ದರಿಂದ ಕೆಲ ಮುಸಲ್ಮಾನರಲ್ಲಿಯಾದರೂ ವಿವೇಕೋದಯವಾದಂತೆ ತೋರುತ್ತದೆ. ಪಾಕಿಸ್ತಾನದ ಗವರ್ನರ ಜನರಲ್ಲರಾದ ಡಾ. ಜಿನ್ನಾ ಸಾಹೇಬರಾದರೂ ಹಿಂದೀ ಮುಸಲ್ಮಾನರಿಗೆ ಹಿಂದುಸ್ತಾನ ಸರಕಾರಕ್ಕೇ ನಿಷ್ಠರಾಗಿ ಉಳಿಯಬೇಕೆಂದು ಹೇಳಹತ್ತಿರುವರು. ಇಷ್ಟು ದಿನಗಳ ವರೆಗೆ ಹಿಂದುಸ್ತಾನದ ಬಗ್ಗೆ ಅತ್ಯಂತ ವೈರ ಭಾವವನ್ನು ತಳೆದು ಹಿಂದುಸ್ತಾನದ ಜನಾಂಗಕ್ಕೆ ತಮ್ಮದೇನೂ ಸಂಬಂಧವಿಲ್ಲೆಂದು ಪ್ರತಿಪಾದಿಸುತಿದ್ದ ಪಾಕಿಸ್ತಾನವಾದಿಗಳು ಇಷ್ಟು ಬೇಗನೆ ಹಿಂದುಸ್ತಾನಕ್ಕೆ ನಿಷ್ಠರಾಗಿ ನಡೆಯುವರೆಂದು ಭಾರತೀಯರು ಸಹಸಾ ಭಾವಿಸಲಾರರು. ಅವರ ಕಾರ್ಯಕಲಾಪಗಳನ್ನೆಲ್ಲ ಸಂಶಯಿತ ದೃಷ್ಟಿಯಿಂದ ನೋಡಿದರೆ ಯಾರೂ ಅವರನ್ನು ತೆಗಳಲಾರರು. ಮುಸಲ್ಮಾನರು ಮುಸಲ್ಮಾನೇತರರ ಈ ಸಂಶಯಿತ ಧೋರಣೆಯ ಬಗ್ಗೆ ಯಾವದೇ ರೀತಿಯಿಂದ ಆಕ್ಷೇಪ ತೆಗೆದುಕೊಳ್ಳದೆ ಹಿಂದುಸ್ತಾನಕ್ಕೆ ಅತ್ಯಂತ ನಿಷ್ಠರಾಗಿ, ಮುಸಲ್ಮಾನೇತರರೊಡನೆ ಎಲ್ಲಬಗೆಯಿಂದಲೂ ಸಮರಸರಾಗಿ ಹೋಗಬೇಕು. ಅದರಲ್ಲಿಯೇ ಅವರ ಮತ್ತು ಇಡೀ ದೇಶದ ಹಿತವಿದೆ. ತಮ್ಮದೊಂದು ಪ್ರತ್ಯೇಕ ಜನಾಂಗವೆಂಬ ಭಾವನೆಯನ್ನು ಬಿಟ್ಟುಗೊಟ್ಟಾಗಲೆ ಮುಸಲ್ಮಾನರಿಗೆ ಮೋಕ್ಷವೆಂಬಲ್ಲಿ ಸ್ವಲ್ಪವೂ ಸಂದೇಹವಿಲ್ಲ.

## ಉತ್ಪಾದನೆ ಹೆಚ್ಚಿಸುವುದೆಂತು ?

ಪ್ರಚಂಡ ನಿಸರ್ಗ ಸಂಪತ್ತು, ಜನಬಲವಿರುವ ಹಿಂದುಸ್ತಾನ ಇಷ್ಟು ದಿನಗಳ ವರೆಗೆ ಪರಕೀಯ ಆಳಿಕೆಯಲ್ಲಿ ಸಿಕ್ಕುಬಿದ್ದದ್ದರಿಂದ ದೇಶದಲ್ಲಿ ಉತ್ಪಾದನೆ ಹೆಚ್ಚದೆ ಅನೇಕ ವಿಷಯಗಳಲ್ಲಿ ಅದು ಪರದೇಶಗಳನ್ನೆ ಅವಲಂಬಿಸುವ ಪ್ರಸಂಗವಿದ್ದಿತು. ಆದರೀಗ ಸ್ವಾತಂತ್ರ್ಯ ಸಿಕ್ಕಿದ್ದರಿಂದ ಉತ್ಪಾದನೆಯನ್ನು ಸರ್ವವಿಧದಿಂದಲೂ ಹೆಚ್ಚಿಸಿಕೊಳ್ಳುವುದು ಅತ್ಯವಶ್ಯವಾಗಿದೆ. ಮುಂಬಯಿ ಸರಕಾರದ ಕೂಲಿಕಾರ ಮಂತ್ರಿಗಳಾದ ಶ್ರೀ ನಂದಾರವರು ಈ ಸಂಬಂಧದಲ್ಲಿ ಒಂಭತ್ತು ಮುತ್ತಿನಂಥ ಮಾತುಗಳನ್ನು ಹೇಳಿರುವರು. ಮುಂದಾಳುಗಳನ್ನು ಆರಿಸಿಕೊಳ್ಳುವಾಗ ಪೂರ್ಣ ವಿಚಾರ ಮಾಡಬೇಕು ತಂಟೆಗಳನ್ನು ಹೆಚ್ಚಿಸುವವರಿಂದ ದೂರ ಉಳಿಯಬೇಕು, ವಿಚಾರವಿನಿಮಯದಿಂದ ಕೆಲಸ ಬಗೆಹರಿಯುವಾಗ ಸಂಪಿನ ಮಾತಾಡಬಾರದು, ಸರಕಾರದ ಸವಲತ್ತುಗಳನ್ನೆಲ್ಲ ಪೂರ್ಣ ಉಪಯೋಗಿಸಿಕೊಳ್ಳಬೇಕು, ಕೆಲಸ ತಪ್ಪಿಸಬಾರದು, ಕೆಲಸ ಮಾಡುವಾಗ ಅತ್ತ ಪೂರ್ಣ ಗಮನ ಕೊಡಬೇಕು, ಮೈಗಳ್ಳತನ ಮಾಡಿ ಕೆಲಸ ಕಡಿಮೆ ಮಾಡುವದು ಪಾಪ, ಪ್ರತಿಯೊಬ್ಬನು ತನ್ನ ಶಕ್ತಿಯಿದ್ದಷ್ಟು ಹಾಗು ತೃಪ್ತಿಕರ ಕೆಲಸ ಮಾಡಬೇಕು. ಸಂಯುಕ್ತ ಉತ್ಪಾದನ ಮಂಡಲ ನಿಯಮಿಸಿ ಅದರ ಕಾರ್ಯ ಯಶಸ್ವಿಯಾಗುವಂತೆ ನೋಡಿಕೊಳ್ಳಬೇಕು. ಯಂತ್ರಗಳನ್ನು ಮುರಿದರೆ ಕಚ್ಚಾ ಸಾಮುಗ್ರಿಗಳನ್ನು ಹಾಳು ಮಾಡಿದರೆ ದೇಶಕ್ಕೆ ಅಹಿತ ಮಾಡಿದಂತಾಗುವದು. ಉತ್ಪಾದನೆ ಹೆಚ್ಚಿಸುವ ಸೂಚನೆಗಳನ್ನು ಸಂಘಕ್ಕಾಗಲಿ ಉತ್ಪಾದನೆ ಸಮಿತಿಗಾಗಲಿ ತಿಳಿಸಬೇಕು. ಶ್ರೀ ನಂದಾರವರು ಮಾಡಿದ ಈ ಸೂಚನೆಗಳು ಮಹತ್ವದ್ದಾಗಿದ್ದು ಪ್ರತಿಯೊಬ್ಬ ಕೆಲಸಗಾರ ಮತ್ತು ಕೆಲಸಗಾರ ಸಂಘಗಳು ಅತ್ತ ಗಮನಿಸಿ ಉತ್ಪಾದನೆಯನ್ನು ಹೆಚ್ಚಿಸಬೇಕೆಂದು ಒತ್ತಾಯ ಪೂರ್ವಕ ಬಿನ್ನವಿಸುತ್ತೇವೆ.

## ಸಾಮ್ಯವಾದದ ತಿರುಳು

೭೮೮ಕ್ಕಿಂತ ಹೆಚ್ಚು ಸ್ಥಳಗಳನ್ನು ಮೊನ್ನಿನ ಮ್ಯುನಸಿಪಲ್ ಚುನಾವಣೆಯಲ್ಲಿ ಇಂಗ್ಲೆಂಡಿನ ಲೇಬರ್ ಪಕ್ಷವು ಕಳೆದು ಕೊಂಡದ್ದರಿಂದ ಟೋರಿಗಳಿಗೆ ಒಳ್ಳೇ ಹುರುಪೆದ್ದಿದೆ. ಈ ಸೋಲಿನಿಂದ ಲೇಬರ್ ಸರಕಾರವು ಜನರಿಗೆ ಅಪ್ರಿಯವೆಂಬುದು ಸಿದ್ಧವಾಯಿತೆಂದೂ ಅದರಿಂದ ಈ ಕೂಡಲೆ ಪಾರ್ಲಿಮೆಂಟಿನ ಹೊಸ ಚುನಾವಣೆ ನಡೆಯಬೇಕೆಂದೂ ಛರ್ಚಿಲ್ಲರು ಕೂಗತೊಡಗಿವ್ದಾರೆ. ಆದರೆ ಕೆಳಮನೆ (House of Commons)ಯಲ್ಲಿ ಮಂತ್ರಿಗಳ ಮೇಲೆ ಅವಿಶ್ವಾಸದ ಠರಾವು ಪಾಸಾದ ಹೊರತು ಹೊಸ ಚುನಾವಣೆ ನಡೆಯಲು ಅವಕಾಶವಿಲ್ಲೆಂದು ಅವರಿಗೆ ಅರಿವಿಲ್ಲವೇನೋ! ಅಂತೂ ಅವರು ಲೇಬರ್ ಪಕ್ಷದ ವಿರುದ್ಧವಾಗಿ ಎಲ್ಲೆಲ್ಲೂ ಹೂಲಿಯೆಬ್ಬಿಸಲು ಇದೊಂದು ನೆವವೆನಿಸಿತು. ಆದರೆ ಈ ಸೋಲಿಗಾದರೂ ಲೇಬರ್ ಸರಕಾರದ ಆಡಳಿತದ ರೀತಿ ಕಾರಣವಲ್ಲೆಂದೂ ಮಧ್ಯಮ ವರ್ಗದವರು ತತ್ಪೂರ್ವಕ್ಕಿಂತ ತಮ್ಮ ನಿತ್ಯದ ಸುಖಸಾಮುಗ್ರಿಗಳು ಕಡಿಮೆ ಯಾಗಿರುವುದಕ್ಕೆ ಮಹತ್ವ ಕೊಟ್ಟು ಟೋರಿಗಳಿಗೆ ಮತ ಹಾಕಿದರೆಂದೂ ಹೇಳಲಾಗಿದೆ. ಇದು ಮೂರ್ಖತನ. ಏಕೆಂದರೆ ಸರ್ ಸ್ಟಾಫರ್ಡ್ ಕ್ರಿಪ್ಸರು ಮೊನ್ನಿನ ವಾರದಲ್ಲಿ ಮಾಡಿದ ತಮ್ಮ ಭಾಷಣದಲ್ಲಿ ಹೇಳಿದಂತೆ ಕೆಲವು ಜನರು ಸುಖಿಗಳಾಗಿ ಬಹುಸಂಖ್ಯಾತರು ದುಃಖಿಗಳಾಗಿ ಬಾಳುವ ಜೀವನ ವ್ಯವಸ್ಥೆಗಿಂತ ಎಲ್ಲರೂ ಸಮಾನವಾಗಿ ಇರತಕ್ಕ ಸುಖಸಾಧನಗಳನ್ನು ಹಂಚಿಕೊಂಡು ಬಾಳುವ ವ್ಯವಸ್ಥೆಯೇ ನ್ಯಾಯವಾದುದು. ನೂರು ಜನರನ್ನು ಉಪವಾಸಗೆಡಹಿ ಹತ್ತು ಜನರು ಹೊಟ್ಟೆ ಬಿರಿಯುವಂತೆ ಹಬ್ಬದೂಟ ಉಣ್ಣುವುದಕ್ಕಿಂತ ನೂರು ಜನರು ಇದ್ದುದನ್ನು ಸರಿಯಾಗಿ ಹಂಚಿಉಂಡರೆ ಆಗುವ ಸಾತ್ವಿಕ ಸಂತೋಷ ಹೆಚ್ಚಿನದಲ್ಲವೆ? ಸದ್ಯದ ಅನಿವಾರ್ಯ ಪರಿಸ್ಥಿಯಿಂದ ಅಯಾಚಿತವ್ರತವನ್ನು ಪಾಲಿಸುವಂತೆ ಲೇಬರ್ ಪಕ್ಷ ಅಪ್ಪಣೆ ಕೊಟ್ಟ ಕಾರಣದಿಂದ ಅದನ್ನು ದ್ವೇಷಿಸುವುದು ಸಂಸ್ಕಾರ ಸಂಪನ್ನರ ಲಕ್ಷಣವಲ್ಲ; ಮತ್ತು ಈಗ ಮಾಡುತ್ತಿರುವಂತೆ ಇಂಗ್ಲೆಂಡಿನ ಸ್ಥಳೀಯ ಪತ್ರಿಕೆಗಳು ಅಪಪ್ರಚಾರ ಮಾಡುವುದು, ನ್ಯಾಯ ಶತ್ರುಗಳಾಗಿ ವರ್ತಿಸುವುದು ಹೇಯವಾದುದು. ಕ್ರಿಪ್ಸರು ಈ ಮಾತು ಜಗತ್ತಿನ ಎಲ್ಲ ಪತ್ರಿಕೆಗಳಿಗೂ ಮಧ್ಯಮವರ್ಗದ ಜನರಿಗೂ ಒಂದು ಪಾಠವೇ ಸರಿ. ಇದನ್ನರಿದು ಇಂದಿನ ಹಿಂದೀ ಒಕ್ಕೂಟ ಸರಕಾರವಾದರೂ ಸರ್ವಹಿತದ ಕಡೆಗೆ ಹೆಚ್ಚು ಲಕ್ಷ್ಯಕೊಟ್ಟು ತನ್ನ ಧೋರಣವನ್ನು ರೂಪಿಸಿಕೊಳ್ಳುವುದು ಅನಿವಾರ್ಯವೂ ಅವಶ್ಯಕವೂ ಆದುದು.

## ಕುಟುಂಬ ಸಹಾಯ

ಆಧುನಿಕ ಜಗತ್ತಿನಲ್ಲಿ ತಡವಾಗಿ ಮದುವೆಯಾಗುವುದು ಹೆಚ್ಚು ಹೆಚ್ಚು ರೂಢಿಗೆ ಬರಹತ್ತಿದೆ. ತೀರ ಎಳೆಯ ವಯಸ್ಸಿನಲ್ಲಿ ತಾಯ್ತಂದೆಗಳ ಅಪ್ಪಣೆಯ ಮೇರೆಗೆ ಮದುವೆಯಾಗಿ ಅನಂತರ ಪತಿಪತ್ನಿಯರು ಪರಸ್ಪರ ತಿರಸ್ಕಾರದಿಂದ ಇಡೀ ಜೀವನವನ್ನು ನರಳುತ್ತ ಕಳೆವುದು ಇಲ್ಲವೆ ವಿವಾಹ ವಿಚ್ಛೇದ ಮಾಡಿಕೊಳ್ಳುವುದು ಇಂದು ಪುರಾತನ ಪದ್ಧತಿಯ ಮೇಲೆ ಸೇಡು ತೀರಿಸಿಕೊಳ್ಳಹೋದುದರ ಪರಿಣಾಮ. ಇದಲ್ಲದೆ ವರದಕ್ಷಿಣೆ ಬಳುವಳಿಗಳಿಂದ ಕನ್ಯಾಪಿತೃಗಳು ಸರ್ವನಾಶ ಹೊಂದಿದ ಉದಾಹರಣೆಗಳ ಆಧಾರದ ಮೇಲೆ ಅವೆರಡನ್ನೂ ಬಹಿಷ್ಕರಿಸುವುದೂ ಇಂದು ನಾಗರಿಕವೆಂದು ತಿಳಿಯಲಾಗುತ್ತದೆ. ಆದರೆ ತಡವಾಗಿ ಮದುವೆಯಾದವರೇ ಎಳೆಯ ವಯಸ್ಸಿನಲ್ಲಿ (ಅಂದರೆ ಬಾಲ್ಯದಲ್ಲಲ್ಲ) ಮದುವೆಯಾದ ದಂಪತಿಗಳಿಗಿಂತ ಹೆಚ್ಚಾಗಿ ವಿವಾಹ ವಿಚ್ಛೇದ ಮಾಡಿಕೊಳ್ಳುವುದು ಕಂಡು ಬಂದಿದೆಯೆಂದು ಹೌವಾರ್ಡ್ ವೈಟಮನ್ನನು ತಮ್ಮ "ಒಳ್ಳೆಯ ಮನೆಗಳು ಮತ್ತು ತೋಟಗಳು" ಎಂಬ ಪ್ರಬಂಧದಲ್ಲಿ ಹೇಳಿದ್ದಾರೆ. ಅವರ ಪ್ರಕಾರ ತಡಮಾಡಿ ಮದುವೆಯಾದಲ್ಲಿ ಲೈಂಗಿಕ ಪ್ರವೃತ್ತಿಯ ಪರಸ್ಪರ ವ್ಯವಸ್ಥೆಯಲ್ಲಿ ಮತ್ತು ಅರಿವಿನಲ್ಲಿ ಮೈತ್ರಿ ತಲೆದೋರದೆ ಬಹುಪಕ್ಷ ಸಂಸಾರದಲ್ಲಿ ವಿರಸ ಉಂಟಾಗುವುದೆಂದೂ ಬಳುವಳಿ ವರದಕ್ಷಿಣೆ ಇತ್ಯಾದಿಗಳಲ್ಲದೆ ಆರ್ಥಿಕ ದಶೆಯಲ್ಲಿ ಹೀನರಾಗಿರುವ ತರುಣ ತರುಣಿಯರು ಮದುವೆಯಾಗದೆ ನಿಂತು ತಮಗೂ ಸಮಾಜಕ್ಕೂ ಶತ್ರುಗಳಾಗಿ ಪರಿಣಮಿಸುತ್ತಾರೆಂದೂ ಬರೆಯುತ್ತಾರೆ. ಅದುದರಿಂದ ಅವರ ಪ್ರಕಾರ ೧೮-೨೦ ವರ್ಷ ವಯಸ್ಸಿನ ತರುಣ ತರುಣಿಯರು ಮದುವೆಯಾಗಿ ಸಂಸಾರ ಹೂಡಲು Family Aid ಕುಟುಂಬ ಸಹಾಯವನ್ನು ಸಮಾಜ ಇಲ್ಲವೆ ಸರಕಾರವು ಒದಗಿಸುವುದನ್ನು ಜಾರಿಗೆ ತರಬೇಕೆನ್ನುತ್ತಾರೆ. ಇದೊಂದು ತಿಳಿಯತಕ್ಕ ವಿಷಯವಲ್ಲವೆ?

## ಕಡಿಮೆ ಬೆಲೆಯ ಮನೆಗಳು

ಯುದ್ಧಗಳಿಂದ ಜನವಸತಿಯಲ್ಲಿ ವ್ಯತ್ಯಾಸ ಉಂಟಾಗುವದು ಸಹಜವಿದೆ. ಕೇಂದ್ರ ಸ್ಥಳಗಳಲ್ಲಿ ವಿಶೇಷ ಜನಸಂಖ್ಯೆ ಬೆಳೆಯುವುದು ಆಧುನಿಕ ನಾಗರಿಕತೆಯ ಒಂದು ರೋಗ. ಇಂದು ನಿರ್ವಾಸಿತರ ಮತ್ತು ನಿರಾಶ್ರಿತರ ಸಮಸ್ಯೆಯಿಂದ ಅನೇಕ ನಗರಗಳಲ್ಲಿ ಮನೆಮಠಗಳ ಅಭಾವವು ದುರ್ಧರವಾಗಿದೆ. ಭಾರತದಲ್ಲಿ ಮಾತ್ರವಲ್ಲ. ಇಡೀ ಜಗತ್ತಿನಲ್ಲೇ ಮನೆಗಳ ಕೊರತೆ ಅಸಾಧ್ಯವಾಗಿದೆ. ಇಲ್ಲಿಯ ಶ್ರೀಮಂತರಂತೆ ಅಮೇರಿಕದ ಶ್ರೀಮಂತರಾದರೂ ಹೆಚ್ಚು ಹೆಚ್ಚಾಗಿ ಮನೆಗಳನ್ನು ಕಟ್ಟುತ್ತಿಲ್ಲ. ಇದ್ದ ಮನೆಗಳಿಗೆ ಗಿರಾಕಿ ಹೆಚ್ಚಿದಾಗ ಬಾಡಿಗೆ ಏರಿಸಿ ಕುಬೇರರಾಗುವುದು ಮನೆ ಮಾಲಿಕರ ತಂತ್ರ. ಆದರೆ ಅಮೇರಿಕದಲ್ಲಿಂದು ಕೆಲವು ಕಂಪನಿಗಳು ವಿಶೇಷ ಬಂಡವಾಳ ಹಾಕಿ ದೊಡ್ಡ ದೊಡ್ಡ ಕಾರಖಾನೆ ಮೂಲಕ ಮನೆ ಕಟ್ಟುವುದಕ್ಕೆ ಅನುಕೂಲವಾದ ಸಾಮುಗ್ರಿಗಳನ್ನು ಲಕ್ಷಗಟ್ಟಲೆಯಿಂದ ತಯಾರಿಸತೊಡಗಿದ್ದಾರೆ.

ಈ ವರ್ಷ ಅಮೇರಿಕದಲ್ಲಿ ಲೆವಿಟ್ ಅಂಡ್ ಸನ್ಸ್ ಕಂಪನಿಯು ೬೫೫೦ ಮನೆಗಳನ್ನು ಕಟ್ಟಲಿದೆ ಆ ಒಂದೊಂದು ಮನೆಯಲ್ಲಿ ನಾಲ್ಕು ಕೋಣೆಗಳಿರುತ್ತವೆ. ಅಕ್ಕಸಾಲಿಗನ ಅಂಗಡಿಯಲ್ಲಿ ಅಚ್ಚು ಹೊಯ್ದು ತಯಾರಿಸುವ ಒಡವೆಗಳಂತೆ ಈ ಮನೆಗಳು ಅಳತೆ ಆಕಾರಗಳಲ್ಲಿ ಒಂದೇ ಸಮನಾಗಿರುತ್ತವೆ. ಸಾವಿರಾರು ಮನೆಗಳನ್ನು ಕಟ್ಟುವ ಈ ಯೋಜನೆಯಿಂದ ಕಡಿಮೆ ಖರ್ಚಿನಿಂದ ಕೆಲಸ ಮುಗಿಯುತ್ತದೆ. ಈ ಪ್ರಕಾರ ಕಟ್ಟಿದ ಮನೆ ಒಂದನ್ನು ೬೦ ಡಾಲರಿಗೆ ಬಾಡಿಗೆಗೆ ಕೊಡಲಾಗುತ್ತದೆ. ಈ ೬೫೫೦ ಮನೆಗಳಿಗೆ ಆಗಲೇ ೧೦,೦೦೦ ಗಿರಾಕಿಗಳು ಕಾದಿದ್ದಾರೆ. ಕಂಪನಿಯು ಮನೆಕಟ್ಟಲು ಅಗತ್ಯವಾದ ಸಾಮಾನುಗಳನ್ನು ಒಂದೇ ಅಳತೆಯಲ್ಲಿ ತಯಾರಿಸಿ ಪ್ರತಿಯೊಂದು ನೆಲಗಟ್ಟಿನ ಎದುರು ಸುರಿದು ಬಿಡುತ್ತದೆ. ಅವನ್ನು ಕೆಲಸಗಾರರು ಹಲಗೆಯನ್ನು ಕೂಡಿಸಿ ಪೆಟ್ಟಿಗೆ ತಯಾರು ಮಾಡುವಂತೆ ಜೋಡಿಸಿ ಅತ್ಯಲ್ಪವೇಳೆಯಲ್ಲಿ ಮನೆಗಳನ್ನು ಸಿದ್ಧಪಡಿಸುತ್ತಾರೆ. ಆ ಮನೆಗಳಲ್ಲಿ ಗೂಡು, ಕಪಾಟು, ಅಡಿಗೆಮನೆ, ಬಚ್ಚಲುಮನೆ, ಅಗ್ಗಿಷ್ಟಿಕೆ ಮೊದಲಾದ ಎಲ್ಲ ವ್ಯವಸ್ಥೆಗಳನ್ನೂ ಮಾಡಲಾಗುತ್ತದೆ.

ಈ ಮೇರೆಗೆ ಅಮೇರಿಕನಿಂದು ಗೃಹಾಭಾವವನ್ನು ನೀಗಿಸಲು ಅವಿಶ್ರಾಂತವಾಗಿ ದುಡಿಯುತ್ತಿದೆ. ಮತ್ತು ಕಟ್ಟಡದ ಖರ್ಚನ್ನು ಕಡಿಮೆ ಮಾಡಿ ತನ್ಮೂಲಕ ಇನ್ನೂ ಕಡಿಮೆ ಬಾಡಿಗೆಗೆ ಮನೆಗಳು ದೊರೆನಂತೆ ಮಾಡುವ ಪ್ರಯತ್ನ ಸಾಗಿದೆ. ಭೂಮಿ ತಾಯಿಯ ತೊಡೆಯ ಮೇಲೆ ಆಗಸದ ಬಟ್ಟೆಯನ್ನು ಹೊದೆದು ಮಲಗುವ ಭಾರತದ ನಿರಾಶ್ರಿತರ ಕರುಮೂಲನಿವಾಸ ಇಲ್ಲದಂತಾಗಬೇಕಾದರೆ ಅಮೇರಿಕದಂತೆ ಹಿಂದುಸ್ತಾನ ಸರಕಾರವಾದರೂ ತನ್ನ ತಜ್ಞರ ಸಹಾಯದಿಂದ ಸುಲಭ ದರದಲ್ಲಿ ಪರಿಮಿತಾನುಕೂಲದ ಮನೆಗಳನ್ನು ಜನವಸತಿ ಹೆಚ್ಚಿರುವ ಸ್ಥಳಗಳಲ್ಲಿ ಕಟ್ಟಿಸಲು ತಕ್ಕ ಯೋಜನೆಗಳನ್ನು ಹೂಡಬೇಕಾಗಿದೆ. ಇಲ್ಲದೆ ಹೋದರೆ ಕುಬೇರ ಕುಮಾರರಾದ ಬಂಡವಾಳಶಹರು ಸ್ವಯಂಬ್ರಹ್ಮರಾಗಿ ಅನಾನುಕೂಲ ಸಂಪನ್ನವಾದ ಮನೆಗಳಿಗೆ ಆನೆಮೇಲೆ ಅಂಬಾರಿ ಹಾಕಿ ಕವಡೆ ಚಿಮ್ಮಿದಷ್ಟು ಎತ್ತರದ ಧನರಾಶಿಯನ್ನು ಬಾಡಿಗೆಗಾಗಿ ಬೇಡಿಯಾರು. ಕಾಯದೆಯ ಕಣ್ಣಿಗೆ ಬೂದಿ ಎರಚಬಲ್ಲ ಈ ಬೃಹಸ್ಪತಿಗಳು ಎಂತಹ ಸರಕಾರಕ್ಕಾದರೂ ನೀರುಕುಡಿಸಿ ತಮ್ಮ ಲಾಭವನ್ನು ಶುಕ್ಲ ಪಕ್ಷದ ಚಂದ್ರನಂತೆ ಹೆಚ್ಚಿಸಬಲ್ಲರು. ನಮ್ಮ ಪ್ರಾಂತ ಸರಕಾರಗಳು ಕೇಂದ್ರದೊಡನೆ ಸಹಕರಿಸಿ ಹೊಸ ಹೊಸ ಗೃಹನಿರ್ಮಾಣ ಯೋಜನೆಗಳನ್ನು ಅಮಲಿನಲ್ಲಿ ತರಲು ಮುಂದೆ ಬರಬೇಕು. ಇಲ್ಲದಿದ್ದರೆ ನಿವಾಸಿಗಳ ಧನ ಸೂರೆಯಾಗಿ ಲಾಭಬಡಕತನ ಹೆಚ್ಚಾಗಿ, ಅನಾರೋಗ್ಯ ಬೆಳೆದು ನಗರ ಜೀವನವು ನರಕ ಜೀವನದಿಂದ ತೀರ ಭಿನ್ನವೆನಿಸಲಾರದು.

## ಶಿಕ್ಷಣದ ಬೆಲೆ

ಅಮೇರಿಕದ ಸುಪ್ರಸಿದ್ಧ ಕಾದಂಬರಿಕಾರಳೂ ಶಿಕ್ಷಕಿಯೂ ಆದ ಲೌರಾ ಗ್ರೇಸ್ ಅರ್ಡಮನ್ನಳು "ನಾನು ಶಿಕ್ಷಕಿಯಾಗಿಯೇ ಉಳಿಯುತ್ತೇನೆ" ಎಂಬ ಪ್ರಬಂಧದಲ್ಲಿ ಶಿಕ್ಷಣದಿಂದ ಶಿಕ್ಷಕರಿಗಾಗುವ ಮಾನಸಿಕ ಬೆಳವಣಿಗೆ ಮತ್ತು ಸಹಾನುಭೂತಿಯ ಹೆಚ್ಚಳ ಇವುಗಳನ್ನು ಬಣ್ಣಿಸುತ್ತ 'ಶಿಕ್ಷಕರ ಸಂಬಳ ರಾಷ್ಟ್ರಕ್ಕೊಂದು ಅವಮಾನ' ಎಂದಿದ್ದಾಳೆ. ಇದರಿಂದ ಹಿಂದುಸ್ತಾನದಲ್ಲಿ ಮಾತ್ರವೇ ಅಲ್ಲ; ಜಗತ್ತಿನ ಅನೇಕ ರಾಜ್ಯಗಳಲ್ಲಿ ಶಿಕ್ಷಣದ ಬೆಲೆಯನ್ನು ಜನತೆ ಅರಿತುಕೊಳ್ಳದೆ, ಶಿಕ್ಷಕರಿಗೆ ಜೀವನ ನಿರ್ವಹಣ ಮಾಡಲು ತಕ್ಕ ಆರ್ಥಿಕ ವ್ಯವಸ್ಥೆ ಮಾಡಿಕೊಡುತ್ತಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಇದು ಭಾರತೀಯರಿಗೊಂದು ಪಾಠ. ಏಕೆಂದರೆ ಮೇಲಿನ ಪೂಜ್ಯ ಲೇಖಿಕೆ ಹೇಳುವಂತೆ ಸಾರ್ವಜನಿಕ ಶಾಲೆಯೇ ರಾಷ್ಟ್ರೀಯ ಜೀವನದ ನೆಲೆಗಟ್ಟು.

## ಮೋಟಾರು--ಮರುಳು

ಇಂದು ಅಮೇರಿಕದಲ್ಲಿ ಪ್ರತಿಯೊಂದು ವ್ಯಕ್ತಿಗೂ ಒದೊಂದು ಮೋಟಾರು ಕಾರು ಬೇಕು. ಹೆಂಡತಿಯನ್ನು ಬಿಟ್ಟರಬಹುದು, ಆದರವನು ಕಾರನ್ನು ಬಿಟ್ಟಿರಲಾರ. ೧೯೪೦ರ ಲೆಕ್ಕದ ಪ್ರಕಾರ ಆ ವರ್ಷ ೧ ಕೋಟಿ ಮೈಲುಗಳಷ್ಟು ದೂರ ಮಾನವ ಜೀವಿತದ ೧೦ ಲಕ್ಷ ವರ್ಷಗಳಷ್ಟು ಕಾಲ ಅಮೇರಿಕನ್ನರು ಕಾರು ಮೂಲಕ ಪಯಣ ಮಾಡಿದರಂತೆ!

ಕಾರಿನಿಂದ ವೇಳೆ ಮಿಗುತ್ತದೆಂಬುದು ಭ್ರಾಂತಿ. ಅದರ ಅನುತನು ನೋಡಿಕೊಳ್ಳುವುದರಲ್ಲೇ ಉಳಿತಾಯವಾದ ಕಾಲ ಮತ್ತು ಧನ ಇವು ವ್ಯಯವಾಗುತ್ತವೆ. ಆದರೆ ಅದರಲ್ಲಿ ಹತ್ತಿ ಕುಳಿತು ಹೋಗುದೆಂದರೆ ಬಡಕೂಲಿಕಾರನಿಗಾದರೂ ಸ್ವರ್ಗ ಸುಖವೆನ್ನಿಸುತ್ತದೆ—ಅಷ್ಟೇ ಏಕೆ? ಅದರಲ್ಲಿ ಕುಳಿತರೆ ಅವನು "ಸ್ವರ್ಗಕ್ಕೆ ಕಿಚ್ಚು ಹಚ್ಚೆಂದ"ರೂ ಎಂದಾನು! ನಗರಗಳ ಬೀದಿಗಳಲ್ಲಿ ಕಾರುಗಳ ಓಡಾಟ ಅತಿಹೆಚ್ಚಾಗಿ ಅವು ಕದುರೆಯ ಗಾಡಿಯಷ್ಟು ವೇಗದಿಂದ ಕೂಡ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಹೋಗಲು ಸಾಧ್ಯವಾಗುವುದಿಲ್ಲವೆಂದು ಬರ್ಗನ್ ಇವ್ಯಾನ್ಸರು "ಅಮೇರಿಕನ್ನರು ಮತ್ತು ಅವರ ಕಾರುಗಳ ನಡುವಣ ಅತಿಖರ್ಚಿನ ಪ್ರಣಯ ಪ್ರಸಂಗ" ಎಂಬ ಬರಹದಲ್ಲಿ ಬರೆಯುತ್ತಾರೆ. ಮೇರಿಲ್ಯಾಂಡ ವಿಶ್ವವಿದ್ಯಾನಿಲಯದ ಪ್ರೊ. ಆಲಿವರ್ ಈ ಬೇಕರರ ಪ್ರಕಾರ ಒಂದು ಮಗುವನ್ನು ಸಾಕಲು ಮಾಡಬೇಕಾದಷ್ಟು ಖರ್ಚನ್ನು ಈ ಕಾರಿಗೆ ಮಾಡಬೇಕಾಗುತ್ತದೆಂದು ಹೇಳುತ್ತಾರೆ. "ಅದು ಸುಳ್ಳು. ಮಗು ದೊಡ್ಡದಾದ ಮೇಲೆ ತನಗೂ ಒಂದು ಕಾರು ಬೇಕೆಂದೆನ್ನುವುದರಿಂದ ಆ ಖರ್ಚು ದ್ವಿಗುಣವಾಗುತ್ತದೆಂದು ಪರಿಹಾಸ ಮಾಡುತ್ತಾರೆ ಇವ್ಯಾನ್ಸರು. ಪ್ರೊ. ಬೇಕರರ ಮತದಂತೆ ದಂಪತಿಗಳಿಗೆ ಕಾರಿನ ಪಯಣದ ಹುಚ್ಚು ಹೆಚ್ಚಾಗಿ ಪ್ರಜೋತ್ಪತ್ತಿ ಕ್ರಮೇಣ ಕಡಿಮೆ ಯಾಗಬಹುದಂತೆ!

ಇನ್ನು ಕಾರಿನಿಂದಾಗುವ ಅಪಘಾತಗಳಿಂದ ಸರಾಸರಿ ವರ್ಷಕ್ಕೆ ೪೫ ಸಾವಿರ ಜನ ಸಾಯುವರಂತೆ ಅಮೇರಿಕದಲ್ಲಿ. ೧೦ ಲಕ್ಷ ಜನರಿಗೆ ಗಾಯವಾಗುವುದಂತೆ. ಅಮೇರಿಕದ ಕೂಲಿಕಾರನು ತನ್ನ ದಿನದ ವೇಳೆಯಲ್ಲಿ ೧/೧೦ ರಿಂದ ೧/೫ ರಷ್ಟು ಭಾಗವನ್ನು ಕಾರಿನ ಆರೈಕೆಗಾಗಿ ವೆಚ್ಚಮಾಡುವನೆಂದರೆ ಏನಾಯಿತು? ಇದರಿಂದ ಮೋಟಾರು ಕಾರಿನಂತಹ ಅಪ್ರಯೋಜಕ ಆಟಿಗೆಯಿಲ್ಲವೆಂಬುದ ಸ್ಪಷ್ಟವಾಗುವುದಿಲ್ಲವೆ?

## ಇಸ್ಲಾಮಿನ ರೀತಿ

ಇಸ್ಲಾಂ ಎಂಬುದು ಒಂದು ಅದಮ್ಯವಾದ ಧರ್ಮ. ಅದು ತನ್ನ ಅದಮ್ಯಸನಾತನತ್ವದಿಂದ ಆಧುನಿಕ ವಿಚಾರದ ಪ್ರವೇಶವನ್ನು ಪ್ರತಿಭಟಿಸುತ್ತದೆ. ಮಹಮ್ಮದ್ ಅಬ್ದುಹ್ ಹಾಗೂ ಇಕ್ಬಲರಂತಹ ಉದಾರ ಮತ್ತು ವಿವೇಕ ವಾದಿಗಳೂ ಮಹಮ್ಮದ್ ಅಹ್ಮದರಂತಹ ಬಲಾತ್ಕಾರ ಪ್ರಿಯರೂ ಅದನ್ನು ವಶಪಡಿಸಿಕೊಳ್ಳಲಾರದಾದರು. ಸಾಮಾನ್ಯವಾಗಿ ಡಾಕಾರದಿಂದ ಬೋರ್ನಿಯೋ ವರೆಗಿನ ೨,೨೧,೦೦,೦೦೦೦ ಮುಸಲ್ಮಾನರೂ ಕುರಾನೆಂಬುದು ಖಂಡನಾತೀತವೆಂದು ತಿಳಿದಿರುವುದರಿಂದ ಅದರ ಎಲ್ಲ ಅನುವಾದಗಳೂ ಅಧರ್ಮ್ಯವೆಂದು ಗಣಿಸಲಾಗುತ್ತದೆ. ಈ ವಿಷಯವನ್ನು ಗಮನಿಸಿ ಆಕ್ಸ್‌ಫರ್ಡಿದ ಇಸ್ಲಾಂಪಂಡಿತರಾದ ಶ್ರೀ. ಎಚ್. ಎ. ಆರ್. ಗಿಬ್ಬರು ತಮ್ಮ "ಇಸ್ಲಾಮಿನಲ್ಲಿ ಆಧುನಿಕ ಪ್ರವೃತ್ತಿ" ಎಂಬ ಗ್ರಂಥದಲ್ಲಿ "ಮುಸಲ್ಮಾನನ ಮನಸ್ಸಿನಲ್ಲಿ ಉದಾರವಾದಿತ್ವವು ಅಷ್ಟೇನೂ ಆಳವಾಗಿ ಬೇರುಬಿಟ್ಟಿಲ್ಲ" ವೆಂದು ಅಭಿಪ್ರಾಯಪಡುತ್ತಾರೆ.

ಆದರೆ ಪಾಶ್ಚಾತ್ಯ ವಿಚಾರವನ್ನು ಪ್ರವೇಶಿಸಗೊಡದಿದ್ದರೂ ಪಾಶ್ಚಾತ್ಯ ಯಂತ್ರ ವಿಜ್ಞಾನವನ್ನು ಹೊರಗಟ್ಟಿಲ್ಲ. ಅನೇಕ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಮುಜೀನನು (ಪ್ರಾರ್ಥನಾವಸರ ಸೂಚಕನು) ಗೋಪುರವನ್ನು ಹತ್ತಿ ಪ್ರಾರ್ಥನೆಗಾಗಿ ಜನರನ್ನೆಬ್ಬಿಸಲು ಕೂಗುವುದಿಲ್ಲ. ಅದರ ಬದಲು ಮಸೀದೆಯ ಗೋಪುರಗಳಲ್ಲಿ ಧ್ವನಿವರ್ಧಕ ಯಂತ್ರಗಳನ್ನು ಇಡಲಾಗಿದೆ ಮತ್ತು ಪ್ರಾರ್ಥನೆಯ ಕಾಲದಲ್ಲಿ ಮುಜೀನನು ಸಾರ್ವಜನಿಕ ಸಭೆಯಲ್ಲಿ ಮಾತಾಡುವಂತೆ "ಲಾ ಇಲಾಹ, ಇಲ್ಲಾ ಅಲ್ಲಾಹ್' ಮುಹಮ್ಮದ ರಸೂಲ್ ಅಲ್ಲಾಹ್!" (ಒಬ್ಬನೇ ಒಬ್ಬ ದೇವರಿರುವನು ಮತ್ತು ಮುಹಮ್ಮದನು ಅವನ ಪ್ರವಾದಿಯು) ಎಂದು ಪ್ರಾರಂಭಿಸುತ್ತಾನೆ.

ಇಷ್ಟು ಜನ ಶ್ರದ್ಧಾವಂತ ಮುಸ್ಲಿಮರೇಕಿದ್ದಾರೆ? ಎಂಬ ಪ್ರಶ್ನೆಗೆ ಶ್ರೀ. ಆರ್. ವಿ. ಸಿ. ಬಾಡ್ಲಿ ಎಂಬ ಬ್ರಿಟಿಶ ಗ್ರಂಥಕರ್ತನು ಪಾಕ್ಷಿಕವಾದ ಉತ್ತರವೊಂದನ್ನು ಕೊಡುತ್ತಾನೆ: ಅನಿಶ

## ಮರ್ಕಟ ರಾಜ್ಯ

ದಕ್ಷಿಣ ಆಫ್ರಿಕದಲ್ಲಿ ದರ್ಬಾನ್ ಎಂಬ ನಗರವೊಂದಿದೆ. ಪುರಾಣಕಾಲದಲ್ಲಿ ಕೇರಳದಲ್ಲಿ ಸ್ತ್ರೀ ರಾಜ್ಯವಿದ್ದಂತೆ ಅಲ್ಲಿ ಇಂದು ಮರ್ಕಟ ರಾಜ್ಯ ಸ್ಥಾಪಿಸಲ್ಪಟ್ಟಿದೆ ಎಂದು ತಿಳಿಯುತ್ತದೆ.

ಆ ನಗರಕ್ಕೆ ಮಂಗಗಳು ಹೇಗೆ ಪ್ರವೇಶಿಸಿದವೋ ಯಾರಿಗೂ ಅರಿಯದು! ಅಂತೂ ಅಲ್ಲಿ ಅವು ಸಂಪೂರ್ಣ ಸ್ವಾತಂತ್ರ್ಯದಿಂದ ತೋಪು ತೋಟಗಳಲ್ಲಿ ನಲಿದಾಡುತ್ತವೆ. ಇವಕ್ಕೆ ಸರಿಯಾಗಿ ಆ ಪಟ್ಟಣದಲ್ಲೊಂದು ಕಾಯದೆ ಇದೆ. ಅದರ ಪ್ರಕಾರ ಯಾವನಾದರೂ ಮರದ ಮೇಲಿನ ಮಂದ ದೇವರಿಗೆ ಅಸಂತೋಷ ಉಂಟು ಮಾಡಿದರೆ ಅವನನ್ನು ಸೆರೆಮನೆಗಟ್ಟಲಾಗುವುದು.

ಆ ಪಟ್ಟಣದಲ್ಲಿ ೩ ಬಗೆಯ ಮಂದಿ ವಾಸಿಸುತ್ತಾರೆ. ಕೋತಿಗಳು ಬಹಳ ಜಾಣ ಜಂತುಗಳೆಂಬವರದೊಂದು ಪಕ್ಷ; ಅವು ಭೂತಗಳ ದೂತರೆಂಬವರದು ಮತ್ತೊಂದು ಪಕ್ಷ; ಉಳಿದವರೆಂದರೆ ನಗರದ ಹೊರವಳಯದಲ್ಲಿ ವಾಸಿಸುತ್ತ ಸ್ವಾನುಭವದಿಂದ ಕಪಿಗಳೆಂದರೆ ಪ್ರೌಢ, ಪಟಿಂಗ, ಅಧಿಕಪ್ರಸಂಗಿ, ಮತ್ತು ಬೀಗ ಬಡಿದ, ಮೊಳೆ ಜಡಿದ ಪೆಟ್ಟಿಗೆಯೊಳಗಿಟ್ಟ ಒಡವೆಗಳನ್ನಾದರೂ ಕಳುವ ಪಂಡಿತ ಪ್ರಾಣಿಗಳೆಂದು ತಿಳಿದವರು–ಎಂದು ಅಸ್ಟಿನ್ ಫೆರಾಜರು ಬರೆಯುತ್ತಾರೆ.

ನಗರವನ್ನು ಸೂರೆ ಮಾಡುವ ಈ ತಿಮ್ಮಣ್ಣರ ಬಗ್ಗೆ ನಗರ ಸಭೆಯ ಸದಸ್ಯರೊಬ್ಬರು ಹೊಟ್ಟೆಗಿಲ್ಲದ್ದಕ್ಕೆ ಅವು ಹಾಗೆ ಮಾಡುತ್ತವೆ! ನಾವು ಅವಕ್ಕೆ ಆಹಾರ ಹಾಕಿ ನೋಡೋಣ ಎಂದರು. ಪ್ರಾಣಿಹಿಂಸಾ ನಿವಾರಣ ಸಂಘದವರು ಕ್ಯಾರಟ್, ಕುಂಬಳಕಾಯಿ, ಚಪ್ಪರ ಬದನೆ (ಟೊಮ್ಯಾಟೋ)ಗಳನ್ನು ಅವಕ್ಕೆ ತಿನ್ನಿಸುತ್ತಾರೆ. ಇದು ಅವಕ್ಕೆ ಹಲ್ಲಿಗೆ ಹಿಡಿದು ಹೋಗಿದೆ.

ಕೋಡಗಗಳ ಕೋಟಲೆ ಬಹಳ ಹೆಚ್ಚಾದಾಗ ನಗರದ ಹಿರಿಯರು ಹಿಂಸಿಸದೆ ಅವನ್ನು ದೂರ ಸಾಗಿಸುವವರಿಗೆ ೫೦ ಡಾಲರ್ ಬಹುಮಾನ ಕೊಡಲಾಗುವುದೆಂದು ಸಾರಿದರು. ಆದರೆ ಅದಕ್ಕೊಪ್ಪಿ ಯಾವಕಿಂದರಿಜೋಗಿಯೂ (Pide Piper) ಮುಂಬರಿಯಲಿಲ್ಲ. ಒಬ್ಬನೆಂದ ಹೆಂಡಕುಡಿಸಿ ಅವುಗಳನ್ನು ಎಚ್ಚರತಪ್ಪಿಸಿ ನೂರಾರು ಮೈಲುಗಳಾಚೆ ಸಾಗಿಸತಕ್ಕದ್ದು; ಮತ್ತೊಬ್ಬ ಅಶ್ರುವಾಯು ಪ್ರಯೋಗಿಸಬೇಕು, ಬಲೆ ಬೀಸಬೇಕು ಎಂದ: ಮಗುದೊಬ್ಬನು ಆಹಾರಕ್ಕೆ ಅಮಲು ಪದಾರ್ಥ ಸೇರಿಸಿ ಕೊಡಬೇಕು ಎಂದ; ಒಬ್ಬನು ಬಾಳೆ ಹಣ್ಣುಗಳನ್ನು ಇಟ್ಟು ಒಂದು ಬೋನನ್ನು ತೆಗೆದುಕೊಂಡು ಬಂದ; ಮೊದಲ ದಿವಸ ೨೦ ಮಂಗಗಳನ್ನು ಹಿಡಿದ; ಮರುದಿನ ಬರೀ ಒಂದು ಮಾತ್ರ ಸಿಕ್ಕಿತು.

ಒಂದು ಕಡೆ, ಕೋತಿಗಳು ನನ್ನ ಬಟ್ಟೆಗಳನ್ನು ಕದ್ದವು, ಪಾತ್ರೆಗಳನ್ನು ಕದ್ದವು, ಎಂದು ಮುಂತಾಗಿ ಪತ್ರಿಕೆಗಳಲ್ಲಿ ಲೇಖನಗಳು ಬರುತ್ತಲೇ ಇರುತ್ತವೆ! ಮತ್ತೊಂದು ಕಡೆ ಕೋಡಗ ಕಾದಲರು (ಕಪಿಪ್ರಿಯರು) ಕಾಳು, ಬೇಳೆ, ನೆಲಗಡಲೆ, ಸವತೆ ಕಾಯಿ, ಬಾಳೆ ಹಣ್ಣುಗಳನ್ನು ತೆಗೆದುಕೊಂಡು ಆದಿತ್ಯವಾರದ ದಿನ ನಗರದ ಚೌಕ ವೊಂದರಲ್ಲಿ 'ಕಪಿಪ್ರಸಾದನವ್ರತ'ವನ್ನು ಆಚರಿಸುತ್ತಿರುತ್ತಾರೆ. ಇದಕ್ಕೇನೆನ್ನಬೇಕು? ತಮಾಷೆಗಳಿಗೆ ಸೋಲದೆ ಮಂಗಣ್ಣಗಳ ಮಂಗತನದ ಕೃತ್ಯಗಳಿಂದ ನಷ್ಟ ಹೊಂದಿದವರು ಕ್ಯಾಪ್ಟನ್ ಜಿ. ಎಲ್. ಜೋನ್ಸರನ್ನು ಮಂಗದ ಬೇಟೆ (ಕೊಲ್ಲದೆ)ಗಾಗಿ ನಿಯಮಿಸಿದರು. ತಿಂಗಳು ಒಂದಕ್ಕೆ ಅವರು ೧೫೦ ಕಪೀಶ್ವರರನ್ನು ಹಿಡಿಯಬೇಕಾಗಿತ್ತು ಮೊದಲ ಐದು ತಿಂಗಳುಗಳಲ್ಲಿ. ಆದರೆ ೩ ತಿಂಗಳಲ್ಲಿ ಅವರು ಕೇವಲ ೪೬ ಜನ ಕಿಷ್ಕಿಂಧೆಯ ಪ್ರಜೆಗಳನ್ನು' ಹಿಡಿಯಲು ಶಕ್ತರಾದರು. ಅದರಿಂದ ಬೇಸತ್ತು ಅವರು ಮಧ್ಯ ಆಫ್ರಿಕಕ್ಕೆ ತಿರುಗಾಡಲು ಹೋದರು. 'ಎಲ್ಲ ದೇವರು ಬಂದು ತಲ್ಲಣಗೊಂಡರು ಇಲ್ಲಿಯ ಕಾಟ ಇಲ್ಲುಳಿಯಿತಲ್ಲೋ' ಎಂಬಂತೆ ದರ್ಬಾನಿನ ಗೃಹಸ್ಥರಿಂದು ಮಂಗಗಳ ಕಾಟದಿಂದ ಕಂಗಾಲಾಗಿ ಚಿಂತೆಯಿಂದ ತಲೆಯ ಮೇಲೆ ಕೈಯಿಟ್ಟು ಕುಳಿತಿದ್ದಾರೆ.

---

ವಾದ ಕೊರತೆಯ ಮರುಭೂಮಿಯಲ್ಲಿ ಇಲ್ಲವೆ ಕಾಡಿನ ಎದೆಯೊತ್ತುವಂತಹ ಕತ್ತಲಲ್ಲಿ ಪಾಶ್ಚಾತ್ಯನಾಗರಿಕತೆಯ ವಿವಿಧಾಕರ್ಷಣಗಳಿಲ್ಲದಿರುವಾಗ ಜನರಿಗೆ ಪೂಜೆಯ (ಪ್ರಾರ್ಥನೆಯ) ಆವಶ್ಯಕತೆಯು ನಿರಂತರವಾದುದೂ ತ್ವರಿತದ್ದೂ ಎನಿಸುತ್ತದೆ.

# ಅಂತರರಾಷ್ಟ್ರೀಯ

## ಜಗತ್ತಿನ ನಿರಾಶ್ರಿತರು

ಇಂದು ಭಾರತದಲ್ಲಿ ಮಾತ್ರವಲ್ಲ, ಇಡೀ ಜಗತ್ತಿನಲ್ಲೇ ನಿರಾಶ್ರಿತರ ಸಮಸ್ಯೆಯೊಂದು ಪೆಡಂಭೂತವಾಗಿ ಪರಿಣಮಿಸಿದೆ. ಯುರೋಪಿನ ನಿರಾಶ್ರಿತರಿಂದು ಜಗತ್ತಿನ ನಾನಾ ಮೂಲೆಗಳಿಗೆ ಹೊಟದ್ದಾರೆ. Knock it will open- —ನೂಕು, ಅದು ತೆರೆಯುತ್ತದೆ, ಎಂಬ ಕ್ರೈಸನ ವಾಕ್ಯವನ್ನು ಪರೀಕ್ಷೆಗೆ ಗುರಿಪಡಿಸಿದ್ದಾರೆ. ಕಳೆದ ಮಹಾಯುದ್ಧದಲ್ಲಿ ರಾಗದ್ವೇಷಗಳ ಮಿತಿಮೀರಿದ ಮಟ್ಟದ ಮೇಲೆ ರೂಪಿತವಾದ ರಾಜಕೀಯ ಪಕ್ಷಗಳಲ್ಲಿ ಇಂದು ಯಾವುದು ಅಧಿಕಾರಾರೂಢವಾಗಿದೆಯೋ ಅದು ದುರ್ಬಲ ಪಕ್ಷದವರನ್ನು ನಾನಾ ವಿಧವಾದ ಹಿಂಸೆ ಮತ್ತು ದಾಸ್ಯಗಳಿಗೆ ಗುರಿಪಡಿಸುತ್ತದೆ. ಇದೊಂದು ಸೇಡಿನ ಯುಗ. ಎಲ್ಲಿ ನೋಡಿದರೂ ಇಸ್ಲಾಮಿನ ತತ್ವವಾದ 'Tit for Tat—ಮುಯ್ಯಿಗೆ ಮುಯ್ಯಿ, ಎಂಬುದನ್ನೇ ಜನ ಅವಲಂಬಿಸಿದೆ. ಪ್ರತಿಯೊಂದು ರಾಷ್ಟ್ರದಲ್ಲೂ ಬಹುಮತ ಪ್ರಾಬಲ್ಯವುಳ್ಳ ರಾಷ್ಟ್ರೀಯತೆ ಬೆಳೆದು ಬಂದು ರಾಷ್ಟ್ರಪುರುಷನಿಂದು ಕೇವಲ ಸ್ವಾರ್ಥಿಯೂ ಪರರಲ್ಲಿ ವಿಶ್ವಾಸವಿಡದವನೂ ಆತ್ಮರಕ್ಷಣೆ ಅಕ್ರಮಣ ಈ! ಎರಡರಲ್ಲೊಂದಕ್ಕಾಗಿ ಅಹೋರಾತ್ರ ಶ್ರಮಿಸತಕ್ಕವನೂ ಆಗಿದ್ದಾನೆ.

ಯುರೋಪಿನ ನಿರಾಶ್ರಿತರ ಸಂಖ್ಯೆ ೮೩೫,೦೦೦. ಅವರು ಸ್ವರಾಷ್ಟ್ರಗಳಿಗೆ ಹೋಗಲು ಸಿದ್ಧರಾಗಿಲ್ಲ; ಏಕೆಂದರೆ, ಮೊದಲು ಅವರು ಸದ್ಯದಲ್ಲಿ ಅಧಿಕಾರಾರೂಢವಾಗಿರುವ ಸರ್ಕಾರದಲ್ಲಿಯ ನಾಯಕರನ್ನು ವಿರೋಧಿಸಿದವರಿದ್ದಾರೆ; ಅವರಿಗೀಗ ಸೇಡಿನಂಜಿಕೆ ಮೇಲೆ ಕೊಟ್ಟಿದ್ದರಲ್ಲಿ ನೂರಕ್ಕೆ ೩೦ ಪೋಲರು, ೨೫ ಯಹೂದಿಗಳು, ೧೭ ಬಾಲ್ಟಿಕ್ಕರು, ೧೬ ರಶಿಯನ್ನರು, ೭ ಯುಗೋಸ್ಲೋವಿಯನ್ನರು, ೫ ಮಿಕ್ಕವರು ಇದ್ದಾರೆ. ಈ ಎಲ್ಲರೂ ಬಯಸುವದೇನೆಂದರೆ, ಯಾವುದಾದರೊಂದು ರಾಜ್ಯಕ್ಕೆ ಹೋಗಿ ಧಾರ್ಮಿಕ ಮತ್ತು ರಾಜಕೀಯ ಸ್ವಾತಂತ್ರ್ಯ ಪಡೆದು ಹಾಯಾಗಿ ಬದುಕಬೇಕೆಂಬುದೇ. ಆದರೆ ಈ ಆಸೆ ಈಡೇರಲು ಜಗತ್ತಿನ ವಿವಿಧ ರಾಷ್ಟ್ರಗಳ ಸ್ವಾರ್ಥ ಅಡ್ಡಬರುತ್ತದೆ. ಆಶ್ರಯಕ್ಕಾಗಿ ಎಲ್ಲಿ ಹೋದರೂ 'ಹಾಂ ತಡೆಯಿರಿ'ಯೆಂದು ಸ್ಥಳೀಯ ಅಧಿಕಾರಿಗಳು ತಮ್ಮ ದೇಶದ ರಾಜಕೀಯ ಧೋರಣ, ಕೃಷಿಕೈಗಾರಿಕೆಗಳ ಅವಶ್ಯಕತೆ, ಮತ, ಧರ್ಮ, ದೇಹಶಕ್ತಿ, ವಯೋಮಾನ ಮುಂತಾದವುಗಳಲ್ಲದೆ ಸಂಖ್ಯಾಪರಿಮಿತಿಯನ್ನೂ ದೃಷ್ಟಿಯಲ್ಲಿಟ್ಟುಕೊಂಡು ನೂರು ಸಲ ಅಳೆದು ಸುರಿದು ಕೆಲವರಿಗೆ ಪ್ರವೇಶ ಕೊಡುತ್ತಾರೆ.

ವಿಸ್ತಾರವೂ ಸಮೃದ್ಧವೂ ಆಗಿ ಜಗತ್ತಿನ ಆಶಾಕಿರಣವೆನಿಸಿದ ಅಮೇರಿಕದ ಸಂಯುಕ್ತ ಸಂಸ್ಥಾನದ ಕಡೆ ಬಹಳ ಜನರು ಮುಖಮಾಡಿ ನಿಂತಿದ್ದಾರೆ. ಆದರೆ ಒಂದೆಡೆ ಹೊರಗಣ ಜನ ಒಳಹೊಕ್ಕು ವಾಸಿಸಬರುವುದನ್ನು ತಡೆವ ಕಟ್ಟುಕಟ್ಟಳೆಗಳನ್ನು ಸ್ವಲ್ಪವೂ ಸಡಿಲಿಸಲು ಅಮೇರಿಕದ ಕಾಂಗ್ರೆಸ್ಸು ತಯಾರಿಲ್ಲವೆಂದು ಹೇಳಲಾಗುತ್ತದೆ. ನಿರಾಶ್ರಿತರಲ್ಲಿ ಕಮ್ಯುನಿಸ್ಟರಿದ್ದರೆ ಮಾಡುವುದೇನು? ಅವರ ಆಗಮನದಿಂದ ನಮ್ಮಲ್ಲಿಯ ನಿರುದ್ಯೋಗಿಗಳ ಸಂಖ್ಯೆ ಹೆಚ್ಚಾಗಿಬಿಟ್ಟರೇನು ಗತಿ? ಅವರ ಮತ ಧರ್ಮ ಇತ್ಯಾದಿಗಳು ಬೇರೆಯಿದ್ದು, ಬಂದನಂತರ ಅವರು ಅವುಗಳ ಪ್ರಚಾರಕ್ಕೆ ತೊಡಗಿದರೆ ಮಾಡಬೇಕೇನು? ಅವರು ರೋಗಗ್ರಸ್ತರೂ ದುರ್ಬಲರೂ ಇದ್ದರೆ ದೇಶದ ಉತ್ಪನ್ನ ಹೆಚ್ಚಿಸಲು ಅವರು ಸಹಾಯಕರಾಗದೆ ಸಮಾಜಕ್ಕೊಂದು ಹೊರೆಯೆನಿಸಿಬಿಟ್ಟರೆ ಮುಂದೇನು? ಮುದುಕರಿದ್ದರೆ? ಕೇಡಿಗಳಿದ್ದರೆ? ದಡ್ಡರಿದ್ದರೆ? ಈ ಪ್ರಕಾರ ನಿರುಪಯೋಗಿಗಳು ಇಲ್ಲವೆ ಉಂಡಮನೆಯಗಳವೆಣಿಸುವವರು ಇದ್ದುಬಿಟ್ಟರೆ? ಎಂಬ ನಾನಾ ಸಂದೇಹ ಸಂದೋಹಗಳನ್ನಿಟ್ಟುಕೊಂಡು ರಾಷ್ಟ್ರಗಳಿಂದು ನಿರಾಶ್ರಿತರಿಗೆ ಉದಾರವಾಗಿ ಪ್ರವೇಶ ಕೊಡಲು ನಿರಾಕರಿಸುವವು. ಆಸ್ಟ್ರೇಲಿಯಾವು ಹೇಗೆ ಬಿಳಿಯರ ಸ್ವತ್ತಾಯಿತೋ, ದಕ್ಷಿಣ ಅಫ್ರಿಕ ಹೇಗೆ ಸ್ಮಟ್ಸ ಕುಲದ ಇಡುಗಂಟಾಯಿತೋ, ಹಾಗೇ ದಕ್ಷಿಣ ಮತ್ತು ಉತ್ತರ ಅಮೇರಿಕದ ರಾಜ್ಯಗಳಾದರೂ ಸುಲಭವಾಗಿ ನಿರಾಶ್ರಿತರನ್ನು ಸೇರಿಸಿ ಕೊಳ್ಳುವುದಿಲ್ಲ. ಅಲ್ಲದೆ, ಈ ನಿರಾಶ್ರಿತರನ್ನಾದರೂ ಇದ್ದಕ್ಕಿದ್ದ ಹಾಗೆ ಯಾರೂ ಸೇರಿಸಿಕೊಳ್ಳುವಂತಿಲ್ಲ. ಏಕೆಂದರೆ, ಸಿಂಧ ಮತ್ತು ಹೈದರಾಬಾದುಗಳಲ್ಲಿ ಹೇಗೆ ಹಿಂದುಗಳನ್ನು ಹೊಡೆದೋಡಿಸಲು ನಿರಾಶ್ರಿತರೆಂದು ಕರೆದುಕೊಂಬ ಮುಸಲ್ಮಾನರನ್ನು ಸಾವಿರಗಟ್ಟಲೆಯಲ್ಲಿ ಕರೆಸಿಕೊಳ್ಳಲಾಯಿತೋ ಹಾಗೇ ಬೇರೆ ಬೇರೆ ರಾಷ್ಟ್ರಗಳಿಂದ ಬೇರೆ ಬೇರೆ ರಾಜಕೀಯ ಪಕ್ಷದವರು ಗುಪ್ತ ವೇಷಧಾರಿಗಳಾಗಿ ಪಂಚಮದಲ ಚಟುವಟಿಕೆಗಳನ್ನು ನಡೆಸಲೇಕೆ ಹೊರಟರಬಾರದು? ಅಲ್ಲದೆ, ಉದ್ಯೋಗಶೀಲರಲ್ಲದವರನ್ನು ಯಾವ ದೇಶವಾದರೂ ಬರಮಾಡಿಕೊಂಡರೆ ರಾಷ್ಟ್ರದ ಸಂಪತ್ತು ಕರಗದಿರುವುದೆ? ಈ ಮಾತುಗಳೇನು ಸುಳ್ಳಲ್ಲ. ಅದರಿಂದಲೇ ನಿರಾಶ್ರಿತರಿಗೆ ಅಮೇರಿಕನ್ನರ ಸಹಾನುಭೂತಿಯಿಲ್ಲ, ಔದಾರ್ಯವಿಲ್ಲ. ಪಾಲಿಸ್ತಾನದಲ್ಲೀಗ ಆಗುತ್ತಿರುವುದೇನು? ನಿರಾಶ್ರಿತರೆನಿಸಿದ ಯಹೂದಿಗಳು ಬಲಾತ್ಕಾರದಿಂದ ಒಳಹೊಕ್ಕು ತಳವೂರಲು ಹೊಂಚುಹಾಕಿ ಭಯಂಕರ ಕೋಲಾಹಲವನ್ನೆಬ್ಬಿಸಿಲ್ಲವೆ? ಇಂತಹ ಪರಿಸ್ಥಿತಿಯಲ್ಲೂ ವರ್ಷಂಪ್ರತಿ ೧೩೦,೦೦೦ ಜನರು ಅಮೇರಿಕದ ಸಂಯುಕ್ತ ಸಂಸ್ಥಾನದಲ್ಲಿ ಆಶ್ರಯ ಪಡೆಯುತ್ತಿದ್ದಾರೆ. ಇವರಲ್ಲದೆ ಕಾಯದೆಯ ಕಣ್ಣಿಗೆ ಬೂದಿ ಹಾಕಿ ಒಳಹೊಕ್ಕವರು ಕಳೆದ ವರ್ಷ ೧೫೦,೦೦೦ ಜನರಿದ್ದರಂತೆ! ಇಟಲಿಯೊಂದರಿಂದಲೆ ೧ ಕೋಟಿ ೪ ಲಕ್ಷ ಜನರು ವರ್ಷ ವರ್ಷಗಳಿಂದ ಬರುತ್ತಲೇ ಇದ್ದಾರೆಂದು ತಿಳಿಯುತ್ತದೆ.

ಭಾರತವಿಂದು ನಿರಾಶ್ರಿತರ ಸಮಸ್ಯೆಯನ್ನೆದುರಿಸಬೇಕಾಗಿದೆಯೆಂಬುದು ಸರ್ವವಿದಿತ. ಮೇಲಿನ ವಿಚಾರದಿಂದ ಅದೊಂದು ಪಾಠ ಕಲಿಯಬೇಕಾಗಿದೆ. ರಾಷ್ಟ್ರ ಹಿತಕ್ಕೆ ಒದಗುವವರನ್ನಲ್ಲದೆ ಅನ್ಯರನ್ನು ಕೇವಲ ಔದಾರ್ಯದಿಂದ ಒಳಬಿಟ್ಟರೆ—ಅದರಲ್ಲೂ ಪಾಕಿಸ್ತಾನೀ ಚಾಣಕ್ಯರು ಮೈಯೆಲ್ಲ ಕಣ್ಣಾಗಿ ಸಮಯ ಸಾಧಿಸುತ್ತಿರುವಾಗ—ಭಾರತದ ಗತಿ ರಸಾತಳಕ್ಕೆ ಮುಟ್ಟೀತು. ನ್ಯಾಯವಾದ ನಿರಾಶ್ರಿತರಿಗಿಂತ ಪ್ರಚ್ಛನ್ನ ರಾಜಕೀಯ ಮನುಷ್ಯರೇ ಹೆಚ್ಚಾಗಿರುವಂಥ ಸದ್ಯ: ಪರಿಸ್ಥಿತಿಯಲ್ಲಿ ಯಾವ ಸರಕಾರವಾದರೂ ಬಹು ಜಾಗೃತಿಯಿಂದ ವರ್ತಿಸಬೇಕಾಗುತ್ತದೆ. ಇದೇ ಮಾತುಗಳನ್ನು ಗಾಂಧಿಯವರು ಕೂಡ ಕೆಲವೊಮ್ಮೆ ಸೂಚ್ಯವಾಗಿ, ಕೆಲವೊಮ್ಮೆ ವಾಚ್ಯವಾಗಿ ಹೇಳಿದ್ದಾರೆ. ಆ ಮಾರ್ಗದಲ್ಲಿ ನಮ್ಮ ಗೃಹಮಂತ್ರಿಗಳು ಹೆಜ್ಜೆಯಿಡಬೇಕಾಗಿದೆ, ಹಿಂದೀಯರ ಹಿತವನ್ನು ಸಾಧಿಸಬೇಕಾಗಿದೆ.

## ಆಟಂಬಾಂಬಿನ ಗುಟ್ಟು

ರಶಿಯದ ಪರರಾಷ್ಟ್ರ ಮಂತ್ರಿಯಾದ ಎಂ. ಮೊಲಟೋವರು ಅಣುಬಾಂಬಿನ ಗುಟ್ಟು ಅಮೇರಿಕದ ಸಂಯುಕ್ತ ಸಂಸ್ಥಾನದವರಿಗೆ ಮಾತ್ರವಲ್ಲ, ತಮ್ಮ ನಾಡಿಗರಿಗೂ ತಿಳಿದಿದೆಯೆಂದು ಹೇಳಿದ್ದುಂಟು. ಇದು ಅಕ್ಷರಶಃ ಸತ್ಯವೆಂದು ನಂಬಲು ಬರುವುದಿಲ್ಲವೆಂದು ಅನೇಕರ ಅಭಿಪ್ರಾಯವಿದೆ. ಮೊಲಟೋವರ ಮಾತಿನಲ್ಲೂ ಸಾಕ್ಷಾತ್ತಾಗಿ ತಾವು ತಯಾರಿಸುತ್ತಿದ್ದೇವೆಂಬುದರ ಸೂಚನೆಕೂಡ ಇಲ್ಲ. ತನ್ನಲ್ಲಿರುವ ಅಂಟಂಬಾಂಬುಗಳನ್ನು ನಾಶಗೊಳಿಸಬೇಕೆಂದು ಅಮೇರಿಕಕ್ಕೆ ಒತ್ತಾಯಿಸುತ್ತಿರುವ ರಶಿಯವು ಒಮ್ಮೆ ಅಮೇರಿಕ ಹಾಗೆ ಮಾಡಲೊಪ್ಪಿದರೆ ರಶಿಯವೂ ತನ್ನಲ್ಲಿರುವ ಅಟಂಬಾಂಬುಗಳನ್ನು ಹೊರತೆಗೆದು ನಾಶ ಪಡಿಸಬೇಕಾಗುತ್ತದೆ. ಅಲ್ಲಿ ಬಾಂಬೇ ಇಲ್ಲದಿದ್ದರೆ?— ಎಂಬುದೇ ಒಂದು ರಾಜಕಾರಣದಲ್ಲಿಯ ತಮಾಷೆ. ಆದರೆ ಇತ್ತೀಚೆ ರಶಿಯವು ಆಟಂಬಾಂಬಿನ ತಯಾರಿಕೆಗಾಗಿ ತೋರುತ್ತಿರುವ ಉತ್ಸಾಹ ಮತ್ತು ಮಾಡುತ್ತಿರುವ ಪ್ರಯತ್ನ ಇವುಗಳನ್ನು ಗಮನಿಸಿದರೆ ಇಂದಲ್ಲದಿದ್ದರೂ ಇನ್ನು ಕೆಲಕಾಲದಲ್ಲೇ ಅದು ಜಯಶಾಲಿಯಾಗದಿರದೆಂದು ಹೇಳುವಂತಿದೆ. ಇದರ ಜೊತೆಗೆ ಅಮೇರಿಕವಾದರೂ ತನ್ನಲ್ಲಿಯ ಅಟಂಬಾಂಬುಗಳನ್ನು ನಾಶ ಮಾಡಲು ಹೊರೆದೆಗೆಯುವುದೆಂಬುದು ದುರೂಹ್ಯ. ಜಗತ್ತಿನ ಕಾಲದಂಡ ವೆನಿಸುವ ಈ ಮೃತ್ಯುಬೀಜದದೆಸೆಯಿಂದ ಜಗತ್ತೆಷ್ಟು ದುರಂತ ಪ್ರಕರಣಗಳನ್ನೆದುರಿಸಬೇಕಾಗಿದೆಯೋ ಬಲ್ಲರಾರು? ಕಾಲಗರ್ಭದಲ್ಲಿಡಗಿದ್ದು ಬರಲಿರುವುದು ಶಾಂತಿಯೋ ಯುದ್ಧವೋ ಎಂಬುದನ್ನು ಅದೇ ನಿರ್ಣಯಿಸುತ್ತದೆ.

## ಬ್ರಹ್ಮದೇಶದಲ್ಲಿ ರಕ್ತದಾಹ

ಬ್ರಹ್ಮದೇಶದ ಮುಖ್ಯಮಂತ್ರಿಗಳಾದ ಥಾಕಿನ್ ನೂರರವರನ್ನು ಕೊಲೆ ಮಾಡಲು ಯತ್ನಿಸಲಾಯಿತೆಂಬುದನ್ನು ಕೇಳಿದರೆ ಅಲ್ಲಿ ಎಂತಹ ರಕ್ತಪಿಪಾಸೆ ಉರಿದೆದ್ದಿದೆಯೆಂಬುದು ಸ್ಪಷ್ಟವಾಗುತ್ತದೆ. ತಾಮಸೀ ವೃತ್ತಿಯನ್ನು ತಡೆಗಟ್ಟಲು ಸರಕಾರವೆಷ್ಟೇ ಹೆಣಗಿದರೂ ಪಾಪಿಗಳ ಪಾಪಬುದ್ಧಿ ಇನ್ನೂ ಕಾರ್ಯೋನ್ಮುಖವಾಗಿಯೇ ಉಳಿದಂತಿದೆ. ಸ್ವಯಂಸೇವಕ ದಲವನ್ನು ಹಿಡಿದು ಎಲ್ಲ ಬಗೆಯ ಸ್ವಂತ ಸೈನ್ಯಗಳನ್ನೂ ತೆಗೆದು ಹಾಕಿ ಸರಕಾರ ವೇನೋ ಸ್ತುತ್ಯವಾದ ಕಾರ್ಯವನ್ನೇ ಮಾಡಿದೆ. ಅದಲ್ಲದೆ ಅನಧಿಕೃತವಾಗಿ ಆಯುಧಗಳನ್ನಿಟ್ಟು ಕೊಂಡವರನ್ನು ಸಾರ್ವಜನಿಕವಾಗಿ ಮರಣದಂಡನೆಗೆ ಗುರಿಪಡಿಸುವುದನ್ನು ಕೂಡ ಜಾರಿಗೆ ತರಲಾಗಿದೆ. ಇಷ್ಟಾದರೂ ಅರಕಾನಿನಲ್ಲಿ ಗಲಭೆಯೆಂಬ ಸುದ್ದಿ ಬಂದಿದೆ. ಆದರೆ ಈ ಗಲಭೆಗಳೆಲ್ಲ ಅಷ್ಟೇನೂ ಆಶ್ಚರ್ಯಕಾರಕವಲ್ಲ. ಹಳೆಯ ಸರಕಾರ ಹೋಗಿ ಹೊಸ ಸರಕಾರ ಬರುವಾಗ ಎಷ್ಟೋ ದೇಶಗಳಲ್ಲಿ ಇದಕ್ಕಿಂತ ನೂರಾರುಪಟ್ಟು ಹೆಚ್ಚಿನಕೊಲೆ ಕೊಳ್ಳೆಗಳು ನಡೆದು ಹೋದದ್ದು ಚರಿತ್ರೆಯಲ್ಲಿದೆ. ಬ್ರಿಟಿಶರ ಸೈನ್ಯ ಹೊರಟು ಹೋದ ಮೇಲೆ ಬ್ರಹ್ಮದೇಶದ ರಾಷ್ಟ್ರೀಯ ಸೈನ್ಯದಲವೇ ದೇಶದ ಶಾಂತಿರಕ್ಷಣೆ ಮಾಡಬೇಗಾಗುತ್ತದೆ. ಥಾಕಿನ್ ನೂರವರ ಸರಕಾರ ದಕ್ಷತೆಯಿಂದ ಶಾಂತಿ ಸುವ್ಯವಸ್ಥೆಗಳನ್ನು ಕಾಯ್ದುಕೊಳ್ಳಲು ತಕ್ಕ ಕ್ರಮ ಕೈಕೊಳ್ಳದಿರದೆಂಬ ನಂಬಿಗೆಯಿದೆ.

## ಗುಪ್ತ ಮಂತ್ರಾಲೋಚನೆ

ಲಂಡನ್ನಿನಲ್ಲಿ ನವೆಂಬರ ೮ರಲ್ಲಿ ಅಫ್ರಿಕದ ಗವರ್ನರರೆಲ್ಲ ಸಭೆ ಸೇರಿದರೆಂದು ಸುದ್ದಿ ಬಂದಿದೆ. ಬ್ರಿಟಿಶ ವಸಾಹತು ಮಂತ್ರಿಗಳು ಅದನ್ನು ಉದ್ಘಾಟಿಸಿದರು. ಈ ಸಭೆಯು ೨ ವಾರಗಳವರೆಗೆ ನಡೆಯುವುದೆಂದೂ ಅದರ ಕಾರ್ಯಕಲಾಪಗಳೆಲ್ಲವನ್ನೂ ಗುಪ್ತವಾಗಿಡಲಾಗುವದೆಂದೂ ತಿಳಿಯುತ್ತದೆ. ಸಭೆಯಲ್ಲಿ ರಾಜಕೀಯ ಆರ್ಥಿಕ, ಸಾಮಾಜಿಕ ಮತ್ತು ಆಡಳಿತದ ದೃಷ್ಟಿಯಿಂದ ಅಫ್ರಿಕಕ್ಕೆ ಸಂಬಂಧಿಸಿದ ವಿಷಯಗಳು ಚರ್ಚಿಸಲ್ಪಡುವವೆಂದು ಹೇಳಲಾಗಿದೆ. ಅಫ್ರಿಕದಲ್ಲಿರುವ ೧೦ ಬ್ರಿಟಿಶ ವಸಾಹತುಗಳ ಗವರ್ನರರೂ ಅವರ ಸಲಹೆಗಾರರೂ ಸಭೆಗೆ ಹಾಜರಿರುವರು. ಕ್ರೀಶ್ ಜೋನ್ಸರ ಸ್ವಾಗತ ಭಾಷಣಕ್ಕೆ ಉತ್ತರವಾಗಿ ನೈಗೇರಿಯದ ಗವರ್ನರರಾದ ಲಾರ್ಡ ಮಿಲ್ಸರ್ ಟನ್ನರು ಮುಂದಿನ ವರ್ಷ ಲಂಡನ್ನಿನಲ್ಲಿ ಸೇರಿಸಬೇಕೆಂದಿರುವ ಪರಿಷತ್ತಿಗೆ ಇದೊಂದು ಕಾರ್ಯಕಾರಿ ಮಂಡಲವೆಂದು ತಮ್ಮ ಭಾಷಣದಲ್ಲಿ ಹೇಳಿದರು. ಮುಂದೆ ಸೇರಲಿರುವ ಆ ಪರಿಷತ್ತಿಗೆ ಆಯಾ ಪ್ರದೇಶಗಳ ಅಫ್ರಿಕನ್ ಪ್ರತಿನಿಧಿಗಳನ್ನೂ ಆಹ್ವಾನಿಸಲಾಗುವುದಂತೆ.

ಮುಂದೆ ಪರಿಷತ್ತು ಕೂಡಲಿ, ಕೂಡದಿರಲಿ, ಸದ್ಯದ ಸಭೆ ನಿರ್ಣಯಿಸಲಿರುವ ಮಹತ್ವದ ರಾಜಕಾರಣ ವಿಷಯವಾದರೂ ಯಾವುದು? ಪೂರ್ವ ಅಫ್ರಿಕ, ದಕ್ಷಿಣಅಫ್ರಿಕ ಮತ್ತು ನೈರುತ್ಯ ಅಫ್ರಿಕಗಳಲ್ಲಿರುವ ಹಿಂದೀಯರು ಪ್ರಬಲರಾಗುತ್ತಿರುವುದನ್ನು ತಡೆಗಟ್ಟಲು ಯುರೋಪ್ಯ ಆಡಳಿತಗಾರರು ಯಾವ ಯೋಜನೆಯನ್ನು ಸಿದ್ಧಮಾಡಬಹುದು?– ಎಂಬುದೇ ಗೂಢವಾಗಿದೆ. ಅಫ್ರಿಕನ್ನರಿಗೆ ನಾಗರಿಕ ಹಕ್ಕುಗಳನ್ನು ಕೊಡದೆ, ಹಿಂದೀಯರಿಗೂ ಅವರಿಗೂ ಮನಸ್ತಾಪ ಹುಟ್ಟುವಂತೆ ಪ್ರಚಾರ ನಡೆಸಿ, ಸಂಯುಕ್ತರಾಷ್ಟ್ರ ಸಂಘದ ಅಪ್ಪಣೆಯನ್ನು ಮೀರಿ ಜನರಲ್ ಸ್ಮಟ್ಸರು ನಿರಂಕುಶರಾಗಿ ಆಡಳಿತ ಸಾಗಿಸುತ್ತಿರುವುದು ಸರ್ವವಿದಿತವಾಗಿದೆ. ಈ ಸಂದರ್ಭದಲ್ಲಿ ಸಂ. ರಾ. ಸಂಘದಲ್ಲಿ ಒಮ್ಮೆ ಬಂದ ಮಾತಿನಂತೆ ಅದರ ಸತ್ವಪರೀಕ್ಷೆಯಾಗಲಿರುವುದು ದ. ಅಫ್ರಿಕದ ಪ್ರಶ್ನೆಯನ್ನು ಇತ್ಯರ್ಥಪಡಿಸುವುದರಲ್ಲಿಯೇ ಎಂಬುದು ನಿರ್ವಿವಾದವು. ಆದುದರಿಂದ ಮೇಲಿನ ಗುಪ್ತಮಂತ್ರಾಲೋಚನೆಯಲ್ಲಿ ಬಿಳಿಯರ ಒಳಸಂಚೇನಿರಬಹುದೆಂಬುದು ದುರೂಹ್ಯವಲ್ಲ. ಸ್ಥಾನಭದ್ರತೆಗಾಗಿ, ತಮ್ಮ ಆಡಳಿತ ಅಧಿಕಾರಗಳನ್ನು ನಿರ್ವಿಘ್ನವಾಗಿ ಸಾಗಿಸುವುದರ ಸಲುವಾಗಿ ತಲೆಖರ್ಚು ಮಾಡಲಿದ್ದಾರೆ. ಮಾಡಿದರೆ ಮಾಡಲಿ. ಜಯಾಪಜಯಗಳೇನು ಅವರ ಕೈಯಲ್ಲಿಲ್ಲವಲ್ಲ!

## ಪಾಲಿಸ್ತಾನದ ಬಗ್ಗೆ ಚರ್ಚೆ

ಸಂ. ರಾ.—ಸಂಘದ ಪಾಲಿಸ್ತಾನ ವಿಭಜನಾ ಸಮಿತಿಯು ಜೆರೂಸಲೇಮ ನಗರವನ್ನು ಮೂರು ಪಾಲು ಮಾಡುವ ಬಗ್ಗೆ ಬಂದ ಸೂಚನೆಗಳನ್ನೆಲ್ಲ ಪರಾಂಬರಿಸಿತು. ಮೊದಲ ಮೂಲ ಹೇಳಿಕೆಯಲ್ಲಿ ವಿಶೇಷ ಸಮಿತಿಯು ಇಡೀ ನಗರವನ್ನೇ ಅಂತರ್ ರಾಷ್ಟ್ರೀಯ ನಿಯಂತ್ರಣದಲ್ಲಿಡಬೇಕೆಂದು ಸೂಚಿಸಿತ್ತು. ಆದರೆ ಉರುಗ್ವೆಯು ಆಯಾ ಬಹುಸಂಖ್ಯಾಕ ಪ್ರದೇಶಗಳನ್ನು 'ಅರಬ ಯಹೂದಿಗಳಿಗಿತ್ತು ಹಳೆಯ ನಗರವನ್ನು ಮಾತ್ರ ಅಂತರ್ ರಾಷ್ಟ್ರೀಯ ನಿಯಂತ್ರಣದಲ್ಲಿಡಬೇಕೆಂದಿತು. ಈ ಸಲಹೆಯನ್ನು ರಶಿಯ, ಪೋಲೆಂಡ್, ಮತ್ತು ಜೆಕೋಸ್ಲೋವೇಕಿಯಗಳು ಬೆಂಬಲಿಸಿದವು. ಆದರೆ ಅ. ಸಂ. ಸಂಸ್ಥಾನ ವಿರೋಧಿಸಿತು. ಈ ಸಂದರ್ಭದಲ್ಲಿ ಅನೇಕರು ಮಾತನಾಡಿದರು. ಆಸ್ಟ್ರೇಲಿಯದ ಪ್ರತಿನಿಧಿಯೂ ಪಾಲಿಸ್ತಾನ ತಾತ್ಕಾಲಿಕ ಸಮಿತಿಯ ಅಧ್ಯಕ್ಷನೂ ಆದ ಹರ್ಬರ್ಟ್ ಇವ್ಹಾಟರು ಸಂ. ರಾ. ಸಂಘವು ಯಾವ ನಿರ್ಣಯಕ್ಕೂ ಬರದಿರಬಹುದಾದ ಹೆದರಿಕೆಯನ್ನು ವ್ಯಕ್ತಪಡಿಸಿ ತಮ್ಮ ನೇತೃತ್ವದಲ್ಲಿ ಸೇರಿದ ೫೭ ಜನಾಂಗಗಳ ಸಭೆಯಲ್ಲಿ ಕೊನೆಯ ನಿರ್ಣಯಕ್ಕೆ ಬರುವ ವರೆಗೆ ಸಭೆ ಮುಗಿಸಬಾರದೆಂದು ಹೇಳಿದರು. ಅದಕ್ಕಾಗಿ ಅವರು ಇಂಗ್ಲಂಡಿನ ರಾಜಕುಮಾರಿಯ ಮದುವೆಗೆ ಹೋಗುವುದನ್ನು ಕೂಡ ನಿಲ್ಲಿಸಿ ಬಿಟ್ಟಿದ್ದಾರೆಂದು ತಿಳಿಯುತ್ತದೆ. ಇದು ಸ್ತುತ್ಯ.

## ಮೊರಾಕೋದ ಸ್ವಾತಂತ್ರ್ಯ ಚಳವಳ

ಲೇಕಸಕ್ಸೆಸದಿಂದ ಬಂದ ಒಂದು ಸುದ್ದಿ ಬಹು ಚಮತ್ಕಾರದ್ದಾಗಿದೆ. ಪಾಕಿಸ್ತಾನದ ಪ್ರತಿನಿಧಿ ನಾಯಕರಾದ ಸರ್ ಮಹಮ್ಮದ್ ಜಾಫರುಲ್ಲಾ ರವರು ರಾಜಕೀಯ ಸಮಿತಿಯಲ್ಲಿ ಸ್ಪಾನಿಶ ಮೊರಾಕೋ ಇರಬೇಕೆಂದು ಸೂಚಿಸಲಿರುವರೆಂದು ತಿಳಿಯುತ್ತದೆ. ಆ ಪ್ರಕಾರ ಅವರು ಸೂಚಿಸಲೇಬೇಕೆಂದು ಹೇಳಬೇಕಾಗಿದೆ. ಏಕೆಂದರೆ ಮೊರಾಕೋದ ಸ್ವಾತಂತ್ರ್ಯ ಚಳವಳದವರು ಸಂ. ರಾ. ಸಂಘಕ್ಕೊಂದು ಮನವಿ ಕಳುಹಿಸಿದ್ದಾರೆ. ಅದು ಸಂಘವನ್ನು ಕ್ಲಿಷ್ಟಲ್ಪ ಗಡಿಬಿಡಿಗೆ ಗುರಿ ಮಾಡಿದೆಯೆಂದು ಗೊತ್ತಾಗಿದೆ. ಆ ಮನವಿಯಲ್ಲಿ ಆ ಪ್ರದೇಶದಲ್ಲಿ ಕೆಲ ಭಾಗವನ್ನು ಆಳುವ ಫ್ರೇಂಚರ ಮೇಲೆ ೨೫ ಅಪಾದಾನೆಗಳನ್ನು ಹೊರಿಸಲಾಗಿದೆ. ಸ್ಪಾನಿಶ ಮೊರಾಕೋದವರ ಪ್ರಕಾರ ಸ್ಪಾನಿಶ ಜನರಿಗೆ ಸ್ಪಾನಿಶ ಸರಕಾರವಿಂದು ಕೇಡು ಮಾಡಿದೆಯೆಂದು ಸಂ. ರಾ. ಸಂಘವು ತೀರ್ಮಾನಿಸಿದರೆ ಸ್ವಾಭಾವಿಕವಾಗಿ ಆ ಸರಕಾರವು ತಮಗೂ ಕೇಡುಮಾಡಿದೆಯೆಂದೂ ಆ ಕಾರಣದಿಂದ ಅದು ತಮಗೂ ಬೇಡವೆಂದೂ ಹೇಳುತ್ತಿದ್ದಾರೆ. ಈ ವಾದಕ್ಕೆ ಉತ್ತರ ಕೊಡುವುದು ಕಷ್ಟವೇಸರಿ. ಕಾರಣವೇನೆಂದರೆ ಸಂ. ರಾ. ಸಂಘವು ಫ್ರಾಂಕೋ ಸರಕಾರವನ್ನು ಹೀಗಳೆದು ರಾಜತಂತ್ರ ಸಂಬಂಧವನ್ನು ಕಡಿದು ಕೊಂಡಿದೆ. ಆದರೆ ಮೊರಾಕೋ ಮೇಲೆ ಸ್ಪಾನಿಶ ಅಧಿಕಾರವಿರುವುದನ್ನು ಅಲ್ಲಗಳೆಯುವುದು ಅಷ್ಟು ಸುಲಭವಲ್ಲ. ಹಾಗೆ ಮಾಡಿದರೆ ಸಾಮ್ರಾಜ್ಯವಾದವನ್ನೇ ಬಹಿಷ್ಕರಿಸಬೇಕಾಗಿ ಬಂದು, ಅದು ಫ್ರಾನ್ಸಿನ ಮೇಲೂ ಎರಗಬಹುದಾಗಿದೆ. ಇದು ಸಂಘಕ್ಕೆ ಇಷ್ಟವಿಲ್ಲ. ಹಾಗೆಂದು ಸುಮ್ಮನೆ ಕೂಡಲೂ ಸಾಧ್ಯವಿಲ್ಲ. ಇಂದಲ್ಲದಿದ್ದರೆ ನಾಳೆಯಾದರೂ ಮೊರಾಕೋದ ಸ್ವಾತಂತ್ರ್ಯದ ಸಮಸ್ಯೆಯನ್ನು ಪರಿಹರಿಸಲೇ ಬೇಕಾಗಿದೆ. ಮೊರಾಕೋದಲ್ಲಿ ಆಗಲೇ ಎದ್ದ ಸಾಮ್ರಾಜ್ಯಶಾಹಿಯ ವಿರುದ್ಧ ಯುದ್ಧವು ಬಹಳ ಕಾಲದಿಂದ ನಡೆಯುತ್ತ ಬಂದಿದ್ದು, ಫ್ರಾನ್ಸ್-ಸ್ಪೇಯಿನ್ ಎರಡಕ್ಕೂ ವಿರುದ್ಧವಾಗಿದೆ. ಅಲ್ಲಿಯ ಅರಬರು ಸಂಘಟಿತರಾಗಿ ಈ ಬಗ್ಗೆ ತಮ್ಮ ಧೀರನಾಯಕನಾದ ಅಮೀರ ಅಬ್ದುಲ್ ಕರೀಮನ ಕೈಕೆಳಗೆ ಹೋರಾಟಮಾಗಿಸಿದ್ದಾರೆ. ಈ ಹೋರಾಟವಿಂದು ದಿನೇ ದಿನೇ ಬಲಪಡುತ್ತಿದೆ. ಪ್ರದೇಶಗಳಿಂದ ದೇಶದೇಶಕ್ಕೆ ಹಬ್ಬುತ್ತಿದೆ. ಈ ನ್ಯಾಯಪರೀಕ್ಷಣದಲ್ಲಿ ಸಂ. ರಾ. ಸಂಘವು ಯಾವ ರೀತಿ ನಡೆದುಕೊಳ್ಳುವುದೆಂಬುದರ ಮೇಲಿಂದ ಅದರ ಅಸ್ತಿತ್ವದ ಯುಕ್ತಾಯುಕ್ತತೆಗಳು ಜಗತ್ತಿಗೆ ಸ್ಪಷ್ಟವಾಗುವವು.

---

ಅಮೇರಿಕದ "ಬೂನ್ ಕಂಟ್ರಿ ಫೇರ್" ನಲ್ಲಿ ವಿವಿಧ ವಿಷಯ ಪ್ರದರ್ಶನ ನಡೆವಾಗ ಶ್ರೀ. ನಾ. ಕೃಷ್ಣಮೂರ್ತಿಗಳೂ ಅವರ ಸಂಗಡಿಗರಾದ ಶ್ರೀ ಕೋನ್ನರ್ ಬಿ. ಬಿ. ಯವರೂ ಭಾರತದ ಕೆಲವು ಸಾಮಾಜಿಕ ಆಚಾರ ವ್ಯವಹಾರಗಳನ್ನು ಪ್ರದರ್ಶಿಸಿದರು.

---

# ಅಮೇರಿಕದ ಸಮಾಜ ಜೀವನ

## ಲೇ— ಶ್ರೀ ನಾಡಿಗ ಕೃಷ್ಣಮೂರ್ತಿ

---ವಿಶೇಷ ಲೇಖನ ೮—

ಅಮೇರಿಕದ ಒಂದು ವಿಶೇಷವೇನೆಂದರೆ ಎಲ್ಲವನ್ನೂ ಲಕ್ಷಗಟ್ಟಲೆ ತಯಾರಿಸುವುದು. ಇಲ್ಲಿ ಓದಲು ಬೇಕಾದಷ್ಟು ಪುಸ್ತಕಗಳಿವೆ. ಮಾಸಪತ್ರಿಕೆಗಳಿವೆ. ಪುಸ್ತಕಭಂಡಾರಗಳಿವೆ. ಈ ಪುಸ್ತಕ ಭಂಡಾರಗಳಿಗೆ ಸಾರ್ವಜನಿಕರೆಲ್ಲರಿಗೂ ಉಚಿತ ಪ್ರವೇಶ. ಪ್ರತಿಯೊಂದು ಸಣ್ಣ ಹಳ್ಳಿಯಲ್ಲಿಯೂ ಒಂದೊಂದು ಪುಸ್ತಕ ಭಂಡಾರ, ವಾಚನಾಲಯಗಳಿವೆ. ಪುಸ್ತಕಭಂಡಾರಕ್ಕೆ ಹೋದಕೂಡಲೇ ಮೊದಲು ಅಲ್ಲಿರುವ ಗುಮಾಸ್ತನನ್ನು ಕೇಳಿ ಕಾರ್ಡು ತೆಗೆದು ಕೊಳ್ಳಬೇಕು. ಅನಂತರ ಯಾವ ಪುಸ್ತಕವನ್ನು ಬೇಕಾದರೂ ತೆಗೆದುಕೊಂಡು ಓದಬಹುದು.

### ಪತ್ರಿಕೆ ಓದುವುದು

ದಿನಪತ್ರಿಕೆಯನ್ನು ಓದುವುದೊಂದು ಒಳ್ಳೆಯ ಅಭ್ಯಾಸ. ಇದು ಎಲ್ಲರಲ್ಲಿಯೂ ಇರಬೇಕು. ಅಮೇರಿಕದಲ್ಲಿ ಸುಮಾರು ೨೨೦೦ ದಿನಪತ್ರಿಕೆಗಳು,೧೩೦೦ ವಾರಪತ್ರಿಕೆಗಳು, ೭೫೦ ಮಾಸಪತ್ರಿಕೆಗಳು ಇವೆ. ಬಿಸಿ ಬಿಸಿ ಸುದ್ದಿ ಸಾಮಾನ್ಯವಾಗಿ ಮೊದಲನೆಯ ಪುಟದ ಬಲಭಾಗದಲ್ಲಿ ಅಚ್ಚಾಗಿರುತ್ತವೆ. ಬಹು ಮುಖ್ಯವಾದ ಸುದ್ದಿ ಎಡಭಾಗದಲ್ಲಿರುತ್ತದೆ. ಅಮೇರಿಕದ ಪತ್ರಿಕೆಗಳ ಪೈಕಿ, 'ನ್ಯೂಯಾರ್ಕ ಟೈಮ್ಸ್, ದಿ ನ್ಯೂಯಾರ್ಕ ಹೆರಾಲ್ಡ್ ಟ್ರಿಬ್ಯೂನ್, ದಿ ಕ್ರಿಶ್ಚಿಯನ್ ಸೈನ್ಸ್ ಮಾನಿಟರ್, ದಿ ವಾಷಿಂಗಟನ್ ಪೋಸ್ಟ, ದಿ ಅಟ್ಲಾಂಟಾ ಕಾನ್ಸ್ಟಿಟ್ಯೂಶನ್, ದಿ ಸೆಂಟ ಲೂಯಿಸ್, ಪೋಸ್ಟ ಡಿಸ್ಪ್ಯಾಚ್, ದಿ ಚಿಕಾಗೋ ಟ್ರಿಬ್ಯೂನ್, ದಿ ಸ್ಯಾನ್‌ಫ್ರಾನ್ ಸಿಸ್ಕೊ ಕ್ರಾನಿಕಲ್, ದಿ ಪೋರ್ಟ ಲ್ಯಾಂಡ್ ಅರೆಗಾನಿಯನ್ ಮತ್ತು ಪಿ. ಎಂ. ಮುಖ್ಯವಾದುವು. ನ್ಯೂಯಾರ್ಕ ಟೈಮ್ಸ ಪತ್ರಿಕೆ ಪ್ರತಿದಿನವೂ ಎರಡು ಭಾಗ ಪ್ರಕಟಿಸುತ್ತಿದ್ದು ೫೪ ಪುಟಗಳನ್ನು ಓದುಗರಿಗೆ ಕೊಡುತ್ತದೆ. ಇದರ ಬೆಲೆ ನ್ಯೂಯಾರ್ಕನಲ್ಲಿ ೩ ಸೆಂಟ್ಸ. ಇತರ ಕಡೆಗಳಲ್ಲಿ ೫ ಸೆಂಟ್ಸ. ಭಾರತದ ಸುದ್ದಿಗಳನ್ನು ಹೆಚ್ಚಾಗಿ ಪ್ರಕಟಿಸುವ ಪತ್ರಿಕೆಗಳು, ನ್ಯೂಯಾರ್ಕ ಟೈಮ್ಸ, ಹೆರಾಲ್ಡ ಟ್ರಿಬ್ಯೂನ್, ಮತ್ತು ಸೆಂಟಲೂಯಿಸ್ ಪೋಸ್ಟ ಡಿಸ್ಪ್ಯಾಚ್.

### ಅಮೇರಿಕನ್ನರ ಸಂಸಾರ

ಅಮೇರಿಕ ತರುಣ ರಾಷ್ಟ್ರವಾದರೂ, ಪ್ರಪಂಚದ ಇಂದಿನ ಬಹು ಶಕ್ತಿಯುತವಾದ ರಾಷ್ಟ್ರವಾಗಿ, ಇತರ ದೇಶಗಳ ಮೇಲೆ ತನ್ನ ಪ್ರಭಾವವನ್ನು ಬೀರುತ್ತಿದೆ. ಇದಕ್ಕೆ ಕಾರಣಗಳು ಅನೇಕವಿದ್ದರೂ ಮುಖ್ಯವಾದ ಕಾರಣ ಅವರ ಸುವ್ಯವಸ್ಥಿತವಾದ ಸಮಾಜ ಜೀವನ.

ಸಮಾಜ ಮತ್ತು ಸಂಸಾರ ಜೀವನವನು ತಿಳಿಯುವುದರ ಮೂಲಕ ಒಂದು ದೇಶದ ಜನರನ್ನು ಚೆನ್ನಾಗಿ ತಿಳಿದುಕೊಳ್ಳಲು ಸಾಧ್ಯ. ಇದು ಅಮೇರಿಕಕ್ಕೂ ಅನ್ವಯಿಸುತ್ತದೆ. ಅಮೇರಿಕದ ಸಮಾಜಜೀವನ ದೊಡ್ಡ ಪಟ್ಟಣಗಳಾದ ನ್ಯೂಯಾರ್ಕ ಚಿಕಾಗೊ ನಗರಗಳಲ್ಲಿ ಹೆಚ್ಚಾಗಿ ಸಿಕ್ಕಲಾರದು. 'ತಾಯಿಗಿಂತ ಬಂಧುವಿಲ್ಲ ಉಪ್ಪಿಗಿಂತ ರುಚಿಯಿಲ್ಲ' 'ಸ್ವದೇಶಕ್ಕಿಂತ ಮತ್ತೊಂದು ದೇಶವಿಲ್ಲ' ಎಂಬಗಾದೆಗೆ 'ಮನೆಗಿಂತ ಬೇರೊಂದು ಉತ್ತಮ ಸ್ಥಳವಿಲ್ಲ' ಎಂಬುದನ್ನು ಸೇರಿಸಿಕೊಂಡರೆ ಒಪ್ಪುತ್ತದೆ.

ಇಲ್ಲಿನ ಬಹಳ ಸ್ವಲ್ಪ ಮನೆಗಳ ಲ್ಲಿ ಜವಾನರಿದ್ದಾರೆ. ಅವರೂ ನಿಗ್ರೋ ಜನ. ಉಳಿದ ಮನೆಗಳಲ್ಲಿ ಕೆಲಸಗಳೆಲ್ಲ ಯಂತ್ರಗಳಿಂದಲೇ ನಡೆಯುತ್ತವೆ. ಮನೆಯ ಕೆಲಸಗಳೆಲ್ಲ, ಮನೆಯ ಯಜಮಾನಿತಿಯಿಂದಲೊ ಇಲ್ಲವೆ ಇತರ ಮನೆಯ ಜನರಿಂದಲೊ ಮಾಡಲ್ಪಡುತ್ತವೆ. ಅತಿಥಿಗಳಾಗಿ ಮನೆಗೆ ಹೋದವರು ಕೆಲವು ಕೆಲಸಗಳನ್ನು ಮಾಡಬೇಕಾಗುತ್ತದೆ. ಅಮೇರಿಕದಲ್ಲಿರುವ ಪದ್ಧತಿಯಂತೆ ಅತಿಥಿಗಳಾಗಿ ಹೋದವರು ಯಜಮಾನಿತಿಯ ಸಂಗಡ ಪಾತ್ರೆತೊಳೆಯಲು ಸಹಕರಿಸಬೇಕು. ಇದು ಕಡ್ಡಾಯವಲ್ಲ. ಆದರೆ ನಾಗರಿಕತೆ.

### ಸಮಾಜ ಸಂಘಗಳು

ಅಮೇರಿಕದ ಒಂದೊಂದು ಸಮಾಜದಲ್ಲಿಯೂ ಕೆಲವು ಸಂಘಗಳಿರುವುದನ್ನು ನೋಡಬಹುದು. ಗಂಡಸರಿಗಾಗಿ ರೋಟರಿ ಸಂಘ, ಕಿವಾಯಿಸ್ ಸಂಘ. ಹೆಂಗಸರಿಗಾಗಿ ಲೀಗ್ ಆಫ ವಿಮೆನ್ ವೋಟರ್ಸ್, ಅಮೇರಿಕದ ಸ್ತ್ರೀಸಂಘ ಮೊದಲಾದ ಸಂಸ್ಥೆಗಳಿವೆ. ವ್ಯಾಪಾರೋದ್ಯಮವನ್ನು ಅಭಿವೃದ್ಧಿಮಾಡಲು ಚೇಂಬರ್ ಅಫ್ ಕಾಮರ್ಸ್ ಸಂಘವಿದೆ. ಕೂಲಿಕಾರರ ಹಿತರಕ್ಷಣೆ ಮಾಡಲು ಕೂಲಿಕಾರರ ಸಂಘಗಳಿವೆ, ರೈತ ಸಂಘಗಳಿವೆ. 4 H club ಗಳಿವೆ ( Head Hand Heart Health) ಸಮಾಜ ಜೀವನದ ಕೆಲವು ಕೆಲಸಗಳಿಗೆ ಹಣವೆತ್ತಲು Community Chest ಸಂಘವಿದೆ. ಮತಬೋಧೆಗಾಗಿ ಆಯಾ ಚರ್ಚುಗಳಿವೆ.

ಪರದೇಶದ ಯಾತ್ರಿಕರು ಈ ಸಂಘಗಳಿಗೆ ಭೆಟ್ಟಿಕೊಟ್ಟು ಅಮೇರಿಕೆಯ ಜೀವನದ ತಿರುಳನ್ನು ತಿಳಿದುಕೊಳ್ಳಬೇಕು. ಈ ಸಂಘಗಳು ಭಾರತೀಯ ಅಥವಾ ಪರದೇಶದವರ ನಡೆನುಡಿ, ಸಂಸ್ಕೃತಿಗಳನ್ನು ತಿಳಿದುಕೊಳ್ಳಲು ಆತುರರಾಗಿರುತ್ತಾರೆ. ನಮ್ಮದನ್ನು ಅವರಿಗೆ ತಿಳಿಸಿ, ಅವರ ಸಂಸ್ಕೃತಿಯನ್ನು, ನಾಗರಿಕತೆಯನ್ನು ಅರಿತುಕೊಳ್ಳಲು ಅವಕಾಶಗಳಿವೆ.

### ಮತೀಯ ಸಂಸ್ಥೆಗಳು

ಅಮೇರಿಕದಲ್ಲಿ ಮುಖ್ಯವಾದ ಎರಡು ಮತಗಳ ಪ್ರಾಬಲ್ಯವಿದೆ. ಕ್ರೈಸ್ತಮತ ಮತ್ತು ಜ್ಯೂಯಿಷ್ ಮತ. ಕ್ರೈಸ್ತರಲ್ಲಿ ಪುನಃ ಪ್ರಾಟೆಸ್ಟಂಟರು ಮತ್ತು ರೋಮನ್ ಕ್ಯಾಥೋಲಿಕರೆಂದು ಎರಡು ವಿಧ.

ಪ್ರಾಟೆಸ್ಟಂಟ ಪಂಥಕ್ಕೆ ಸೇರಿದವರು ಸುಮಾರು ೪೦ ಮಿಲಿಯನ್ ಜನರಿದ್ದಾರೆ. ಪ್ರಾಟೆಸ್ಟಂಟರಲ್ಲಿಯೂ ಅನೇಕ ಪಂಥಗಳಿವೆ. ಮೆಥಾಡಿಸ್ಟ, ಪ್ರೆಸ್ಬಿಟೇರಿಯನ್, ಬ್ಯಾಪ್ಟಿಸ್ಟ್, ಎಪಿಸ್ಕೋಪಿಯನ್, ಮತ್ತು ಲೂಥರನ್ ಗುಂಪುಗಳು ಪ್ರಾಮುಖ್ಯವಾದುವು. ಈ ಗುಂಪುಗಳ ಮುಖ್ಯ ಉದ್ದೇಶ ಒಂದೇ ಆದರೂ, ವಿಧಾನ ಕಾರ್ಯಕ್ರಮ ಬೇರೆ ಬೇರೆ. ನ್ಯೂಯಾರ್ಕ ನಗರದಲ್ಲಿರುವ Federal-Council of Churches of Christ in America ಎಂಬ ಸಂಸ್ಥೆ ಉಳಿದ ಸಂಸ್ಥೆಗಳಿಗೆಲ್ಲ ಕೇಂದ್ರ.

ರೋಮನ್ ಕ್ಯಾಥೋಲಿಕ್ ಪಂಗಡಕ್ಕೆ ೨೨ ಮಿಲಿಯನ್ ಸದಸ್ಯರಿದ್ದಾರೆ. ಇದರಲ್ಲಿಯೂ ಅನೇಕ ಗುಂಪುಗಳಿದ್ದರೂ ಎಲ್ಲರೂ ಒಂದೇ ಆಡಳಿತ ಮತ್ತು ಮಾರ್ಗದರ್ಶನಕ್ಕೆ ಸೇರಿದವರಾಗಿದ್ದಾರೆ. ರಾಜಧಾನಿ ವಾಷಿಂಗ್ಟನ್ನದಲ್ಲಿರುವ The National Catholic Welfare Conference ಸಂಸ್ಥೆ ಕ್ಯಾಥೋಲಿಕರ ರಾಷ್ಟ್ರೀಯ ಕೇಂದ್ರ ಸಂಸ್ಥೆ.

ಜ್ಯೂಯಿಷ್ ಪಂಥಕ್ಕೆ ಸುಮಾರು ೫ ಮಿಲಿಯನ್ ಜನ ಸೇರಿದವರಿದ್ದಾರೆ. ಸಂಪ್ರದಾಯವನ್ನು ಚಾಚೂ ತಪ್ಪದೆ ನಡೆಸಿಕೊಂಡು ಬಂದಿದ್ದಾರೆ. ಈ ಜ್ಯೂಯಿಷರು. ಆದರೂ ಕೆಲವರು ಸುಧಾರಿಸಿದ್ದಾರೆ. ಶನಿವಾರ ಪೂಜೆಗೆ ಬದಲು ಆದಿತ್ಯವಾರ ಮಾಡುವುದು. ಸಾರ್ವಜನಿಕ ಸ್ಥಳಗಳಲ್ಲಿ ಪ್ರಾರ್ಥಿಸುವುದು, ಸುಧಾರಣೆಗಳಲ್ಲಿ ಕೆಲವು.

ಈ ಮತೀಯ ಸಂಸ್ಥೆಗಳು, ಭಾನುವಾರ ಪ್ರಾರ್ಥನೆಯೊಂದನ್ನೇ ಧ್ಯೇಯವಾಗಿಟ್ಟುಕೊಂಡಿಲ್ಲ. ಇದರ ಜೊತೆಗೆ ಹೆಂಗಸರು, ಮಕ್ಕಳು ವಿದ್ಯಾರ್ಥಿಗಳು ನಕ್ಕು ನಲಿದಾಡಲು ಕೆಲವು ಸಂತೋಷಕೂಟ, ಚರ್ಚಾ ಕೂಟಗಳನ್ನು ಏರ್ಪಡಿಸುತ್ತಾರೆ. ಪರದೇಶದ ಮತಗಳ ವೇದಾಂತವನ್ನು ತಿಳಿದುಕೊಳ್ಳಲು ಕುತೂಹಲಿಗಳಾಗಿರುತ್ತಾರೆ. ಭಾರತೀಯ ವಿದ್ಯಾರ್ಥಿಗಳನ್ನು ಕಂಡರೆ ಈ ಚರ್ಚುಗಳ ಪೂಜಾರಿಗಳು ಬಿಡುವುದೇ ಇಲ್ಲ. ಈ ಪ್ರಭಾವ, ಕೀರ್ತಿ ಸ್ವಾಮಿ ವಿವೇಕಾನಂದರಿಗೆ ಸಲ್ಲತಕ್ಕದ್ದು.

ಈ ಚರ್ಚುಗಳಲ್ಲದೆ, ಇತರ ವಿಧವಾದ ಸಾಮಾಜಿಕ ಕೆಲಸ ಮಾಡಲು ಪ್ರಾಟೆಸ್ಟಂಟರ ಪರವಾಗಿ, Y. M. C. A ಮತ್ತು Y. W. C. A ಗಳಿವೆ. ಅಮೇರಿಕದ ಈಮತಗಳನ್ನು ಅರಿಯದೆ ನಿಜವಾದ ಅಮೇರಿಕವನ್ನು ಕಂಡುಕೊಳ್ಳಲು ಸಾಧ್ಯವಾಗಲಾರದು.

### ಕೆಲವು ಸಾಮಾಜಿಕ ಪದ್ಧತಿಗಳು

ಒಂದು ಹೊಸ ದೇಶದ ಪದ್ಧತಿಯನು ಕಲಿತು ಕೊಳ್ಳಲು ಕಾಲ ಬೇಕಾಗುವುದು. ಮೊದಲಿಗೆ ಬಂದಾಗ ಈ ಕೆಲವು ವಿಷಯಗಳಲ್ಲಿ ತುಂಬಾ ಎಚ್ಚರಿಕೆಯಿಂದಿರಬೇಕು.

### ಕಾಲನಿಯಮ

ನಾವು ಯಾರ ಸಂಗಡಲಾದರೂ ಮಾತನಾಡಬೇಕೆಂದು ಇಷ್ಟಪಟ್ಟರೆ, ಮೊದಲು ಅವರಿಗೆ ಬರೆದಾಗಲೀ ಅಥವಾ ಫೋನ್ ಮಾಡಿಯಾಗಲೀ ಕಾಲ ನಿಗದಿ ಮಾಡಿಕೊಂಡು, ಆ ಹೊತ್ತಿಗೆ ಸರಿಯಾಗಿ ಹೋಗಿ ಅವರನ್ನು ಭೆಟ್ಟಿಮಾಡಬೇಕು. ಈ ಜನಕ್ಕೆಲ್ಲಾ ಸಾಮಾನ್ಯವಾಗಿ ಕಾರ್ಯದರ್ಶಿನಿಯೊಬ್ಬಳಿದ್ದು ಕಾರ್ಯಕ್ರಮವನ್ನು ಗೊತ್ತುಮಾಡುತ್ತಾಳೆ. ಕಾಲ ನಿಗದಿಯಾದ ಹೊತ್ತಿಗೆ ತಿಳಿಸದೆ ಹೋಗದಿರುವುದು ಒಳ್ಳೆಯದಲ್ಲ. ಗಡಿಯಾರ ಅಮೇರಿಕದ ಜೀವನದಲ್ಲಿ ಬಹು ಪ್ರಭಾವಶಾಲಿಯಾದ ಪಾತ್ರ ವಹಿಸಿದೆ. ಹೊತ್ತಿಗೆ ಸರಿಯಾಗಿ ಹೋಗುವುದು ಒಂದು ಒಳ್ಳೆಯ ಸಂಸ್ಕೃತಿಯ ಗುರುತಾಗಿದೆ.

### ತಮಾಷೆ

ಅಮೇರಿಕನ್ನರಿಗೆ ತಮಾಷೆ ಬೇಕು, ಇಂಗ್ಲೀಷ ಜನರಂತೆ ಮುಖಗಂಟುಹಾಕಿಕೊಂಡಿರುವುದು ಈ ಜನಕ್ಕೆ ಆಗದು. ಕಂದಾಚಾರ ಪದ್ಧತಿ ಇವರಿಗೆ ಸಲ್ಲದು. ನಮ್ಮ ಬೆನ್ನಿನ ಮೇಲೊಂದು ಸಲ ಚಪ್ಪರಿಸಿದರೆ, ಅದು ಒಳ್ಳೆಯತನವನ್ನು ತೋರುವ ಚಿನ್ಹೆ. ತಮಾಷೆಗಾಗಿ ಸ್ವಲ್ಪ ಪೀಡಿಸಿದರೆ ಅವರನ್ನು ತುಂಬಾ ಪ್ರೀತಿಸುತ್ತಾರಾಗಿ ತಿಳಿಯಬೇಕು. ಈ ತಮಾಷೆಯ ಗುಣ ಜನರಲ್ಲಿ ಹೊಂದಿಕೊಂಡು ಹೋಗಲು ತುಂಬಾ ಸಹಾಯ ಮಾಡುತ್ತದೆ.

### ಸಾರ್ವಜನಿಕತೆ

ಪ್ರಜಾಪ್ರಭುತ್ವ ಅಮೇರಿಕನ್ನರ ಜೀವನದ ತಿರುಳು. ಪ್ರಜಾಪ್ರಭುತ್ವ ತಮ್ಮ ಹಕ್ಕು ಹೇಗೋ ಅದರ ರಕ್ಷಣೆಯನ್ನೂ ಹಾಗೇ ಮಾಡಬೇಕೆಂದು ತಿಳಿದಿದ್ದಾರೆ. ಟಿಕೆಟ್ಟು ಕೊಂಡುಕೊಳ್ಳುವದಕ್ಕಾಗಿ ಸಾಲಾಗಿ ನಿಲ್ಲುವುದು, ತಮ್ಮ ಸರದಿಗಾಗಿ ಕಾಯುವುದು, ಸಾರ್ವಜನಿಕ ಸ್ಥಳಗಳನ್ನು ಶುಭ್ರವಾಗಿಡಲು ತಮ್ಮ ಸೇವೆಸಲ್ಲಿಸುವುದು, ನೆಲದ ಮೇಲೆ ಅನಾವಶ್ಯಕವಾಗಿ ಕಾಗದ ಚೂರುಗಳನ್ನು ಎಸೆಯದಿರುವುದು ಪಾಯಖಾನೆ ಮನೆ ಚೊಕ್ಕಟವಾಗಿಡುವುದು ರಸ್ತೆಯಲ್ಲಿ ಸಿಂಬಳ ಸೀನದಿರುವದು ಉಗುಳದಿರುವುದು, ಇವೇ ಮುಂತಾದ ಕೆಲವು ಹಕ್ಕುಗಳನ್ನು ರಕ್ಷಣೆ ಮಾಡುತ್ತಾರೆ. ಪರದೇಶದಿಂದ ಬಂದವರು ಇವರನ್ನು ಅನುಕರಿಸಬೇಕು.

### ಉದಾರತೆ

ಯಾರಾದರೂ, ಊಟಕ್ಕಾಗಲೀ, ಅಥವಾ ಕಾಫಿ ತಿಂಡಿಗಾಗಲಿ, ಆಹ್ವಾನ ಕೊಟ್ಟರೆ ತತ್‌ಕ್ಷಣ ನಮ್ಮ ನಿರ್ಧಾರವನ್ನು ತಿಳಿಸುವ ಉತ್ತರವನ್ನು ಕಳುಹಿಸಬೇಕು. ಬರುತ್ತೇವೆಂದು ಬರೆದು ಅಲ್ಲಿಗೆ ಹೋಗದೆ ಇರಬಾರದು. ಒಂದು ವೇಳೆ ಹೋಗಲು ಅನಾನುಕೂಲವಾದರೆ ಮೊದಲೇ ತಿಳಿಸಬೇಕು. ಅವರ ಉದಾರತೆಯನ್ನು ಸ್ವೀಕರಿಸಿದ ನಂತರ ಮರುದಿನ ಅವರಿಗೆ ಅವರ ಉದಾರತೆಯನ್ನು ಸ್ಮರಿಸಿ ಕಾಗದ ಬರೆಯಬೇಕು. ಮನೆಗೆ ಬಂದಾಗಲೆಲ್ಲಾ ಪ್ರತಿನಿತ್ಯ ಚಹಾ ಕೊಡುವದು ಅಮೇರಿಕದ ಪದ್ಧತಿಯಲ್ಲ.

(ಮುಂದುವರಿಯುವುದು)

---

ಮೈಸೂರಿನ ಸ್ಥಾನಿಕ ಸ್ವರಾಜ್ಯಮಂತ್ರಿಗಳಾದ ಶ್ರೀ ಚಾಮುಂಡಿ ಸುಬ್ಬರಾವು ಶೆಟ್ಟರು ೬ ನೇ ತಾ. ಬೆಳಗ್ಗೆ ಮೋಟಾರಿನಿಂದ ದಾವಣಗೆರೆಗೆ ಬಂದು ಪ್ರಮುಖರ ಸಂದರ್ಶನ ತೆಗೆದುಕೊಂಡು ಸ್ಥಳಗಳನ್ನು ಸಂದರ್ಶಿಸಿದರು.



## ಕವಿಕೋಕಿಲ ಸಾಲಿ

( ಷಷ್ಟ್ಯಬ್ದ ನಿಮಿತ್ತ )

ಕೀರ್ತಿ ಭೀರು  
ಕವಿಗಳಾರು  
  ನಿನ್ನಯವೊಲು ತಂದೆ ?  
  ಅರುವತ್ತರ ನಿನ್ನೆತ್ತರ-  
  ಕಿದೊ ಪೂಜೆಯ ತಂದೆ ।  
ಕನ್ನಡ ಕುಲ  
ಕವಿಕೋಕಿಲ  
  ಹಳಗನ್ನಡ ಲೋಲ,  
  ಲಲಿತಪದ, ಪ್ರಸನ್ನಶೀಲ,  
  ನಿನ್ನೆದೆ ಸುವಿಶಾಲ ।  
ಮನ ಪಾವನ  
ತನು ಪಾವನ  
  ಧರ್ಮ ಭಕ್ತಿ ಜ್ಞಾನ,  
  ವಿರತಿ ಭರಿತ  
  ನಿನ್ನ ಚರಿತ  
  ಪ್ರೇಮ ಸುಧಾಖ್ಯಾನ ।  
ಕೊಡಗಿನವಾಲ  
ಗಿರಿಯ ತುಮುಲ  
  ಕಂಡೇನೆದೆ ಹಿಗ್ಗಿ  
  ಉಗ್ಗಡಿಸಿದ ಪದದ ಸುಗ್ಗಿ—  
  ಗಿದೊ, ನಮಿಸುವೆ ಬಗ್ಗಿ ।

—ಪಾಂಡೇಶ್ವರ್

---

# ಜೀವನ ಮತ್ತು ವಿಜ್ಞಾನ

## --ಕೊಬ್ಬುಗಳು--

## FATS

ಲೇ:— ಶ್ರೀ ವೆಂಕೋಬಾಚಾರ್ಯ ಉಪಾಧ್ಯಾಯ, ಎಂ. ಎಸ್. ಸಿ.

ಮಾನವ ದೇಹದಲ್ಲಿ ಕಾವು ಮತ್ತು ಶಕ್ತಿಯನ್ನು ಹುಟ್ಟಿಸುವುದಕ್ಕೆ ಕೆಲವೊಂದು ಆಹಾರ ವಸ್ತುಗಳು ಬೇಕೇಬೇಕು. ಇವುಗಳಲ್ಲಿ ಕೊಬ್ಬು ಮತ್ತು ಪಿಷ್ಟ ಶರ್ಕರಗಳು ಬಹಳ ಮಹತ್ವವುಳ್ಳವಾಗಿವೆ. ಕೊಬ್ಬುಗಳು ಸಕ್ಕರೆ, ಜೇನುತುಪ್ಪ, ಬೆಲ್ಲ ಮತ್ತು ಕೆಲವೊಂದು ಹಣ್ಣುಗಳನ್ನು ಬಿಟ್ಟು ಉಳಿದ ಎಲ್ಲ ಆಹಾರಗಳಲ್ಲಿ ಸಿಕ್ಕುತ್ತದೆ.

ಕೊಬ್ಬುಗಳಲ್ಲಿ ಎರಡು ತರ ೧) ಪ್ರಾಣಿ ಸಂಬಂಧವಾದ ಕೊಬ್ಬುಗಳು ೨) ಸಸ್ಯ ಸಂಬಂಧವಾದ ಕೊಬ್ಬುಗಳು.

ಮಾಂಸದ ಕೊಬ್ಬು, ಹಾಲು, ಬೆಣ್ಣೆ, ತುಪ್ಪ, ಕೆನೆ, ಗಿಣ್ಣು, ಮೀನೆಣ್ಣೆ, ಮೊಟ್ಟೆಯ ಹಳದಿ ಬಿಂದು ಮುಂತಾದವುಗಳು ಮೊದಲನೆಯ ವರ್ಗಕ್ಕೆ ಸೇರಿದ ಕೊಬ್ಬುಗಳು. ಹಿಪ್ಪೆಎಣ್ಣೆ, ಬಾದಾಮಿಎಣ್ಣೆ, ಕೊಬ್ಬರಿ ಎಣ್ಣೆ, ಸಾಸಿವೆ ಎಣ್ಣೆ, ಎಳ್ಳೆಣ್ಣೆ, ಅಗಸೆಯ ಎಣ್ಣೆ, ನೆಲಗಡಲೆಯ ಎಣ್ಣೆ ಮುಂತಾದವುಗಳು ಎರಡನೆಯ ವರ್ಗಕ್ಕೆ ಸೇರಿದ ಕೊಬ್ಬುಗಳು. ಇವಲ್ಲದೆ ಕೊಬ್ಬುಗಳು ಸೋಯಾಬೀನ್ ಓಟ್ಸ್, ಬೇಳೆ, ಕಡಲೆ, ಮೂಲಂಗಿ, ನೌಲಖೋಲ್, ಗಜ್ಜರಿ, ಬದನೆಯ ಕಾಯಿ, ಬಸಳೆ ಸೊಪ್ಪು, ಹಾಲ್ಮೂಲಂಗಿ ಸೊಪ್ಪು ಮುಂತಾದವುಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿಯೂ, ಬೆಳ್ಳಗೆ ಮಾಡಿದ ಅಕ್ಕಿ ಹಾಗೂ ಗೋದಿ, ಸಬ್ಬಕ್ಕಿ ಮತ್ತು ಹಣ್ಣುಗಳಲ್ಲಿ ಕಡಿಮೆಯ ಪ್ರಮಾಣದಲ್ಲಿಯೂ ಇರುತ್ತವೆ.

ಕೊಬ್ಬು, ದೇಹದಲ್ಲಿ ಶಕ್ತಿಯನ್ನು ಹುಟ್ಟಿಸುವುದಲ್ಲದೆ, ದೇಹದಲ್ಲಿದ್ದ ಕಾವು ಹೊರಗೆ ಹೋಗದಂತೆ ನೋಡಿಕೊಳ್ಳುತ್ತದೆ. ಶರೀರವು ದುಂಡುದುಂಡಾಗಿ ತುಂಬಿಕೊಂಡು ಸೊಗಸಾಗಿ ಕಾಣುವುದು ಈ ಕೊಬ್ಬಿನಿಂದಲೇ. ಇದು ದೇಹದಲ್ಲಿ ಹೆಚ್ಚಾದರೂ ಕಷ್ಟ, ಕಡಿಮೆಯಾದರೂ ಕಷ್ಟ; ಕಡಿಮೆಯಾದರೆ ಕಾಲುಗಳು ಬಾಯುವುದಕ್ಕೆ ಪ್ರಾರಂಭವಾಗುತ್ತವೆ. ಹೆಚ್ಚಾದರೆ ಮಲಬದ್ಧತೆ ಹಾಗೂ ಅಗ್ನಿಮಾಂದ್ಯ ಉಂಟಾಗುತ್ತದೆ.

ಎರಡೂ ವರ್ಗದ ಕೊಬ್ಬುಗಳಲ್ಲಿ ಪ್ರಾಣಿ ಸಂಬಂಧವಾದ ಕೊಬ್ಬುಗಳು ಶರೀರ ಪೋಷಣೆಗೆ ಹೆಚ್ಚು ಉತ್ತಮವಾದವುಗಳೆಂದು ಎಣಿಸಲ್ಪಟ್ಟಿವೆ. ಏಕೆಂದರೆ, ಈ ಕೊಬ್ಬುಗಳಲ್ಲಿ 'ಏ' ಜೀವನ ಸತ್ವವು ಹೆಚ್ಚಿನ ಪ್ರಮಾಣದಲ್ಲಿರುತ್ತದೆ. ಕಾರಣ ವನಸ್ಪತಿ ತೈಲಗಳನ್ನು ಆಹಾರದಲ್ಲಿ ಉಪಯೋಗಿಸುವಾಗ, ಅವುಗಳ ಸಂಗಡ 'ಏ' ಜೀವನ ಸತ್ವವನ್ನೊಳಕೊಂಡ ಆಹಾರ ವಸ್ತುಗಳನು ಹೆಚ್ಚಾಗಿ ಸೇವಿಸಬೇಕು.

ಒಟ್ಟಿನ ಮೇಲೆ ಕೊಬ್ಬುಗಳು, ೧) ಶರೀರ ಪೋಷಣೆಗೆ ಬೇಕಾದ ಶಕ್ತಿ ಮತ್ತು 'ಏ' ಜೀವನ ಸತ್ವವನ್ನು ಒದಗಿಸಿಕೊಡುವುದರಲ್ಲಿಯೂ ೨) ದೇಹದಲ್ಲಿದ್ದ ಕಾವು ಹೊರಗೆ ಹೋಗದಂತೆ ನೋಡಿಕೊಳ್ಳುವುದರಲ್ಲಿಯೂ, ೩) ಕೆಲವು ಸೂಕ್ಷ್ಮ ಇಂದ್ರಿಯಗಳನ್ನು ಕೆಡದಂತೆ ಸಂರಕ್ಷಿಸುವುದರಲ್ಲಿಯೂ

ಕರ್ಮವೀರ ಹರಿಜನ ಪುರವಣಿ

# ಅಮೇರಿಕನ್ ಗೆಳೆಯರಿಬ್ಬರ ಸಮಾಧಾನ

(ಮೋ. ಕ. ಗಾಂಧಿ)

ನನಗೆ ಪರಿಚಯವಿಲ್ಲದ ಅಮೇರಿಕನ್ ಗೆಳೆಯರಿಂದ ಬಂದ ಅನೇಕ ಪತ್ರಗಳಲ್ಲಿ ಅಂಥವರಿಬ್ಬರ ಪತ್ರಗಳಿಂದ ಎತ್ತಿದ ಈಕೆಳಗಿನ ಅಂಶಗಳು ಗಮನಾರ್ಹವಾಗಿದೆ :

"ನಿಮ್ಮ ದೇಶದ ದುಃಖಮಯ ಪರಿಸ್ಥಿತಿಯನ್ನು ನೋಡಿ ನಿಮಗೆ ಅಪಾರ ವ್ಯಥೆಯಾಗಿದೆ. ಈ ಪ್ರಸಂಗದಲ್ಲಿ ಭಾರತದಲ್ಲಿಂದು ಜರುಗುತಿರುವ ಮನೋವೇಧಕ ಘಟನೆಗಳನ್ನು ಕುರಿತು ನೀವು ಚಿಂತಾತುರರಾಗಿರುವಾಗ, ನಾನು ಈ ನಡುವೆ, ನಿಮ್ಮ ಸುಂದರ ವಾಕ್ಯಗಳು ಭೂಮಿಯ ನಾಲ್ಕೂ ಮೂಲೆಗಳಲ್ಲಿ ಬೇರೂರುತಿರುವವೆಂಬದನ್ನು ನಿಮ್ಮ ಲಕ್ಷ್ಯಕ್ಕೆ ತಂದುಕೊಡದಿರಲಾರೆ.

"ಈ ವಿಷಾದಕರ ಘಟನೆಗಳ ಕಾರಣದಿಂದ ನಿಮಗೆಬಂದಿಷ್ಟು ಆಶಾಭಂಗವಾಗುವದೇನೋ ಸಹಜ. ಆದರೆ ಈ ಆಶಾಭಂಗಕ್ಕೊಂದು ಮಿತಿಯಿರಲಿ, ಅದು ನಿಮ್ಮ ಎದೆಗೆಡಿಸುವಷ್ಟು ಪ್ರಬಲವಾಗದಿರಲಿ, ಎಂಬದಿಷ್ಟೇ ನಾನು ಪತ್ರ ಬರೆಯಲು ಪ್ರೇರಣೆ ಕೊಟ್ಟಿತು.

" ಬಿತ್ತಿದ ಬೀಜ ಬೆಳೆದು ರೂಪಾಂತರಗೊಳ್ಳುವ ವಿವಿಧ ಅವಸ್ಥೆಗಳನ್ನು ದಾಟಿದಲ್ಲದೆ ನೆಟ್ಟಗೆ ಸುಂದರ ಸುಮಧುರ ಪುಷ್ಪವಾಗಿ ಅರಳುವದು ಅಸಂಭವ. ಬೆಳವಣಿಗೆ ಇಲ್ಲವೆ ರೂಪಾಂತರದ ಯಾವುದಾದರೊಂದು ನಿಟ್ಟಿನಲ್ಲಿ ಅದು ಕಂದತೊಡಗಿದರೆ ಆಗ ಅದಕ್ಕೆ ತೋಟಗಾರನ ಆರೈಕೆ ಎಂದಿಗಿಂತಲೂ ಅವಶ್ಯವಾಗುವದು. ಕಳೆಗುಂದುವ ಸಸಿಯನ್ನು ಆರೈಕೆ ಮಾಡುವ ನಿಃಸ್ವಾರ್ಥ ಕಾರ್ಯದಲ್ಲಿ ಪೂರ್ಣವಾಗಿ ಆಸಕ್ತನಾಗಿರುವಾಗ ತನ್ನ ತೋಟದಲ್ಲಿ ಬೇರೆ ಸಸಿಗಳು ಬೆಳೆಯುತ್ತ ಕೊರಗಿದ ತಮ್ಮ ತಮ್ಮ ದುಃಖದಲ್ಲಿ ಅನುಕಂಪನ ಪಡೆತಿರುವದು ತೋಟಗಾರನ ಗೋಚರಕ್ಕೆ ಸರಿಯಾಗಿ ಬಾರದಿರಬಹುದು.

"ಜಗತ್ತಿನ ಎಲ್ಲ ವರ್ಗಗಳ, ಎಲ್ಲ ಜನಾಂಗಗಳ, ಎಲ್ಲ ಧರ್ಮಗಳ ಅಸಂಖ್ಯ ಜನರು ಇದೇ ಬಗೆಯಾಗಿ ಶಾಂತಿಗಾಗಿ ಮೊರೆಯಿಡುತಿರುವರೆಂಬದನ್ನು ನೀವು ಗಮನಿಸಬೇಕೆಂದು ಬೇಡಿಕೊಳ್ಳುವೆ. ನೀವು ಅವರೆಲ್ಲರ ಆಸೆಯನ್ನು ಬಹಳ ಚನ್ನಾಗಿ ಆಡಿತೋರಿಸಿದ್ದೀರಿ. ಅವರಾದರೂ ನಿಮಗೆ ಶಾಂತಿಶಾಸ್ತ್ರದಲ್ಲಿ ನಿಶ್ಚಯವಾಗಿಯೂ ದೊರೆತ ವಿಜಯಗಳಿಂದ ಹುರಿದುಂಬಿದ್ದಾರೆ. ಆದರಿಂದ ಅಂಥವರೆಲ್ಲರೂ ನನ್ನೊಂದಿಗೆ ದನಿಗೂಡಿಸಿ, ಜಗದ್ಭರ್ತನು ನಿಮ್ಮನ್ನು ಕಾಪಾಡಿ ನೀವು ಮಾಡಬೇಕಾದ ಇನ್ನೂ ಪೂರ್ತಿಯಾಗದ ಈ ಉದಾತ್ತ ಕಾರ್ಯವನ್ನು ಮುಂದುವರಿಸುವಂತೆ ಹರಸಲೆಂದು ಪ್ರಾರ್ಥಿಸಬೇಕು.—

ಇವರು ಹೇಳುವದು ನಿಜವಾಗಿ ಪರಿಣಮಿಸಿದರೂ ಪರಿಣಮಿಸಬಹುದು- ಹಿಂದುಸ್ತಾನದಲ್ಲಿಂದಿಗೂ–ಮೊದಲಿನಷ್ಟೇ ಉಗ್ರವಾಗಿರುವಂತೆ ಕಾಣದಿದ್ದರೂ– ಸಾಗಿಯೇ ಇರುವ ರಕ್ತಸ್ನಾನ ಕೂಡ ಇತಿಹಾಸದ ಗತಿಯಲ್ಲಿ ಅಸಮಾನ್ಯವೇನೂ ಅಲ್ಲವೆಂದು ಸಿದ್ಧವಾಗಬಹುದು. ಆದರೂ ಹಿಂದುಸ್ತಾನದಲ್ಲಿಂದು ಘಟಿಸುತಿರುವದು ಅಸಾಮಾನ್ಯವೆಂದೇ ಹೇಳಬೇಕಾಗುವದು. ನಾನು ಹೇಳುತ್ತಬಂದಿರುವಂತೆ, ಇಂದು ಹಿಂದುಸ್ತಾನಕ್ಕೆ ದೊರಕಿದಂಥ ಸ್ವಾತಂತ್ರ್ಯ ಅಹಿಂಸೆಯ ಫಲವೇ ಆಗಿದ್ದರೆ, ಆ ಅಹಿಂಸೆ ಬರಿ ಹೆಸರಿನ ಪೂರ್ತಿಯದು, ನಿಜವಾಗಿ ಅದು ದುರ್ಬಲರ ನಿಷ್ಕ್ರಿಯ ಪ್ರತೀಕಾರವಾಗಿತ್ತು, ಎಂದು ಹೇಳಬೇಕಾಗುವದು. ಈ ಮಾತಿನ ಸತ್ಯತ್ವಕ್ಕೆ ಇಂದು ಭಾರತದಲ್ಲಿ ನಡೆಯುತ್ತಿರುವ ಘಟನೆಗಳೇ ಸಾಕ್ಷಿ.

ಹೊಸದಿಲ್ಲಿ ೬—೧—೪೭

ಪರದೇಶದ ಸಹಾಯ ಬರಬೇಕೆಂದು ಅಪೇಕ್ಷಿಸದಿದ್ದರೆ ಜಗತ್ತಿನಲ್ಲಿಯ ವಿವಿಧ ಭಾಗಗಳ ದರಿದ್ರರಿಗೆ ಸಹಾಯ ನೀಡಲು ಬಗೆವೆವು.

ನನ್ನ ಜೀವನದಲ್ಲಿ ಎಷ್ಟೋ ದೇವದತ್ತ ಕುಟುಂಬಗಳನ್ನು ನೋಡಿದ್ದೇನೆ. ಆದರೆ ರೇಶನಿಂಗಿನ ಆಲೋಚನೆ ಕೂಡ ತಲೆಗೆ ಬಂದದ್ದು ನೆನಪಿಲ್ಲ.

ಇಂದು ದೇವರ ದಯೆಯಿಂದ ಮಳೆ ನಮಗೆ ತೊಂದರೆ ಕೊಟ್ಟಿಲ್ಲ. ಆದುದರಿಂದ ನಿಜವಾದ ಅನ್ನಾಭಾವವೆಂಬುದಿಲ್ಲ. ಭಾರತದ ಹಳ್ಳಿಗಳಲ್ಲಿ ಬೇಕಾದ ಹಾಗೆ ಕಾಳುಗಳಿವೆ, ಬೇಳೆಯಿದೆ, ಎಣ್ಣೆಯ ಬೀಜವಿದೆ ಕೃತಕವಾದ ನಿಯಂತ್ರಣದ ಅರ್ಥವನ್ನು ಹಳ್ಳಿಗನು ತಿಳಿದುಕೊಳ್ಳಲಾರನು. ಅವನು ಆ ಕಾರಣದಿಂದ ಸಂತೆಯ ಧಾರಣೆಗಿಂತ ಕಡಿಮೆ ಧಾರಣೆಗೆ ಮಾರಲು ಮನಸಾ ಒಪ್ಪುವುದಿಲ್ಲ. ಈ ನಗ್ನ ಸತ್ಯಕ್ಕೆ ಬೇರೆ ನಿದರ್ಶನ ಬೇಡ. ಅದಕ್ಕೆ ಅಂಕೆ ಸಂಖ್ಯೆ ಕಲೆ ಹಾಕಬೇಕಾಗಿಲ್ಲ, ಗುಮಾಸ್ತಗಿರಿ ಮಾಡಬೇಕಾಗಿಲ್ಲ, ಹಳೆಯ ದಫ್ತರ ಹಿಡಿದು ನೌಕರರು ಕೊರತೆಯಿದೆಯೆಂದು ದೊಡ್ಡ ದೊಡ್ಡ ಹೇಳಿಕೆ ತಯಾರಿಸಿ ಸಿದ್ಧಮಾಡಿ ತೋರಿಸಬೇಕಾಗಿಲ್ಲ. ಜನಸಂಖ್ಯೆ ಹೆಚ್ಚಿದೆಯೆಂಬ ಕುರುಡು ನೆವವನ್ನು ಯಾರೂ ನಮ್ಮ ಮುಂದಿಡಲಾರರೆಂದು ನಂಬುವೆ.

### ಅನುಭವಸ್ಥರ ಬುದ್ಧಿವಾದ

ನಮ್ಮ ಮಂತ್ರಿಗಳು ಜನರಿಂದ ಬಂದವರು, ಜನರಿಗೆ ಸೇರಿದವರು; ನಮ್ಮಲ್ಲಿ ಮಂತ್ರಿಗಳ ಸ್ಥಾನವನ್ನಲಂಕರಿಸದ ಎಷ್ಟೋ ಅನುಭವಸ್ಥರಿದ್ದಾರೆ. ಅವರಿಗಿಂತ ತಮಗೇ ಹೆಚ್ಚು ಜ್ಞಾನವಿದೆಯೆಂದು ತಿಳಿದುಕೊಂಡು ಮಂತ್ರಿಗಳು ನಿಯಂತ್ರಣ ಹೋಗಬೇಕೆಂಬ ಅವರ ಅಭಿಪ್ರಾಯವನ್ನು ಅಲ್ಲಗಳೆಯದಿರಲಿ. ರೇಶನ್ನಿನ ದವಸದ ಮೇಲೆಯೇ ಅವಲಂಬಿಸಿದವರಿಗೆ ತಿನ್ನಲು ಯೋಗ್ಯವಾದ ಕಾಳು ಬೇಳೆಗಳು ಸಿಗುವುದು ಕಠಿನ. ರೇಶನ್ನಿನ ಕೊಳೆ ದಿನಸು ತಿಂದು ಅನವಶ್ಯಕವಾಗಿ ಜನರು ಕಾಹಿಲೆ ಬೀಳಬೇಕಾಗುತ್ತದೆ.

### ಪ್ರಜಾಪ್ರಭುತ್ವ ಮತ್ತು ವಿಶ್ವಾಸ

ನಿಯಂತ್ರಿತ ಅಹಾರದ ಬದಲು ಅದೇ ರೇಶನ್ ಅಂಗಡಿಗಳಲ್ಲಿ ಸರಕಾರವು ಒಳ್ಳೆಯ ಧಾನ್ಯಗಳನ್ನು ಮಾರಬಹುದು. ಅವನ್ನು ಜನರು ಸಂತೆಯಲ್ಲಿ ಕೊಂಡಂತೆಯೇ ಕೊಳ್ಳಬಹುದು. ಹಾಗೆ ಮಾಡಿದರೆ ತನ್ನಿಂದತಾನೇ ಬೆಲೆ ಹತೋಟಿಯಲ್ಲಿ ಬರುತ್ತದೆಮತ್ತು ಕೂಡಿಟ್ಟ ಕಾಳು ಬೇಳೆ ಎಣ್ಣೆಯ ಬೀಜಗಳು ಹೊರಬೀಳುತ್ತವೆ. ಕೊಳ್ಳುವ ಬೆಳೆವ ಮತ್ತು ಮಾರುವವರನ್ನು ಅವರು ನಂಬರೇ? ಕಡಿವಾಣದ ಕಟ್ಟಿನಲ್ಲಿ ಪ್ರಜಾಪ್ರಭುತ್ವ ಕಂಗಾಲಾಗುತ್ತದೆ. ಅದು ಕೇವಲ ನಂಬಿಗೆಯ ಮೇಲೆ ನಿಲ್ಲಬಲ್ಲುದು. ಸೋಮಾರಿಗಳಾಗಿದ್ದು ಪರಸ್ಪರರನ್ನು ವಂಚಿಸಿ ಜನರು ಸತ್ತರೆ ಪೀಡೆತೊಲಗಿತೆಂದು ಉಳಿದವರಾದರೂ ಆಗ ಸೋಮಾರಿಯಾಗಿರುವ ಮತ್ತು ಕ್ರೂರಸ್ವಾರ್ಥಿಯಾಗಿರುವ ಪಾಪವನ್ನು ಪುನಃ ಆಚರಿಸರು.

# ಗಾಂಧಿಯವರ ಪ್ರಾರ್ಥನೋತ್ತರ ಭಾಷಣ

ಬಿರ್ಲಾ ಭವನ, ಹೊಸದಿಲ್ಲಿ, ೩—೧೧—೪೭

### ಜಾತೀಯತೆಯ ವಿಷ

ಎರಡು ಪಾಪಿನ ವಿಷಗಳನ್ನು ಬೆರೆಸಿದರೆ ಯಾವುದು ಮೊದಲು ಪರಿಣಾಮ ಕೊಡತೊಡಗಿದುದೆಂಬುದನ್ನು ಯಾರು ನಿರ್ಣಯಿಸಬಲ್ಲರು? ಮತ್ತು ಅಂಥ ನಿರ್ಣಯವನ್ನು ಯಾರಾದರೂ ಕೊಟ್ಟರೂ ಆದರಿಂದ ಆಗುವ ಲಾಭವೇನು? ಪಶ್ಚಿಮ ಪಾಕಿಸ್ತಾನದಲ್ಲಿ ಎಲ್ಲೆಲ್ಲೂ ಈ ವಿಷ ಹಬ್ಬಿದೆ; ಆದರೆ ಅದು ಹಾಗಾಗಿದೆಯೆಂಬುದನ್ನು ಸರಕಾರಗಳು ಅರಿತಿಲ್ಲ. ಒಕ್ಕೂಟವನ್ನು ಗಣಿಸಿದರೆ ಅದು ಅಲ್ಲಿ ಬಹಳ ಸ್ವಲ್ಪ ಭಾಗವನ್ನಾವರಿಸಿದೆ. ದೇವರ ದಯೆಯಿಂದ ಈ ವಿಷ ಬೇರೆಯಾಗಿ ಹತೋಟಿಯಲ್ಲಿ ಉಳಿಯಲಿ! ಆಗ ಅದು ಎರಡೂ ಭಾಗಗಳಿಂದ ಬೇಗನೆ ಹೋದೀತೆಂಬ ನಂಬಿಗೆಗೆ ಇಂಬು ದೊರೆಯುತ್ತದೆ.

### ಆಹಾರ ನಿಯಂತ್ರಣ ತೆಗೆಯಿರಿ

ಡಾ. ರಾಜೇಂದ್ರ ಪ್ರಸಾದರು ಮುಖ್ಯಮಂತ್ರಿಗಳ ಇಲ್ಲವೆ ಅವರ ಪ್ರತಿನಿಧಿಗಳ ಸಭೆಯೊಂದನ್ನು ಕರೆದಿದ್ದಾರೆ. ಆಹಾರ ನಿಯಂತ್ರಣ ಕಾರ್ಯದಲ್ಲಿ ಸಹಾಯ ಸೂಚನೆಗಳನ್ನು ಅವರಿಂದ ರಾಜೇಂದ್ರರು ಪಡೆಯಲಿದ್ದಾರೆ. ಅದರಿಂದ ಈ ಸಂಜೆಯನ್ನು ಮುಖ್ಯವಾದ ಆ ವಿಷಯದ ಬಗ್ಗೆ ವಿನಿಯೋಗಿಸಬೇಕೆನಿಸುತ್ತದೆ. ೬ ತಿಂಗಳೊಳಗೆ ನಿಯಂತ್ರಣವನ್ನು ಪೂರ್ಣವಾಗಿ ತೆಗೆದುಹಾಕಬೇಕೆಂದು ನಾನು ಮೊದಲಿನಿಂದಲೂ ಹೇಳುತ್ತಬಂದಿದ್ದೇನೆ. ನನ್ನ ಅಭಿಪ್ರಾಯವನ್ನು ಬದಲಿಸಲು ಇಲ್ಲಿಯ ವರೆಗೆ ಕೇಳಿದ ಯಾವ ಸಮಾಚಾರವೂ ಸಮರ್ಥವೆನಿಸದು. ಕಾಗದಗಳೂ ತಂತಿಗಳೂ ಬರದಿದ್ದ ದಿನವಿಲ್ಲ. ಅವುಗಳೆಲ್ಲವೂ ಖಂಡಿತೋಕ್ತಿಯಿಂದ ಎರಡೂ ನಿಯಂತ್ರಣಗಳನ್ನು ತೆಗೆದುಹಾಕಬೇಕೆಂದು ಹೇಳುತ್ತವೆ. ಸದ್ಯಕ್ಕೆ ಬಟ್ಟೆಯ ನಿಯಂತ್ರಣವನ್ನು ಬಿಟ್ಟುಬಿಡುತ್ತೇನೆ.

### ನಿಯಂತ್ರಣದಿಂದ ಕೇಡು

ನಿಯಂತ್ರಣದಿಂದ ಮೋಸ ಹುಟ್ಟುತ್ತದೆ, ಸತ್ಯ ತಲೆಯೆತ್ತಲಾರದಾಗುತ್ತದೆ, ಕಳ್ಳಪೇಟೆ ಮತ್ತು ಕೃತಕ ಬರಗಾಲ ಹೆಚ್ಚುತ್ತವೆ. ಇದರ ಮೇಲೆ ಒಂದು ತಲೆ ಮಾರಿಂದ ಕಲಿಯುತ್ತ ಬಂದಿರುವ ಸ್ವಸಹಾಯದ ಪಾಠವನ್ನು ಜನ ಮರೆಯುವಂತಾಗುತ್ತದೆ. ಅವರು ಕೇವಲ ಇನ್ನೊಬ್ಬರು ಹೇಳಿದಂತೆ ಕೇಳುವ ಬುದ್ಧಿಯವರಾಗುತ್ತಾರೆ. ಆಗಲೇ ಬಹು ದೊಡ್ಡ ಅಳತೆಯಲ್ಲಿ ಭ್ರಾತೃಹತ್ಯೆ ನಡೆದಿದೆ; ಪ್ರಜಾ ವಿನಿಮಯದ ಹುಚ್ಚು ಹಾಗೇ ಸಾಗಿದೆ. ಅದರಿಂದ ಅನವಶ್ಯಕವಾಗಿ ಜನರು ಸಾಯುವುದು, ಉಪವಾಸ ಬೀಳುವುದು, ಮನೆ ಮಠಗಳಿಲ್ಲದೆ ಅಲೆಯುವುದು, ಬರಲಿರುವ ಚಳಿಗಾಲದಲ್ಲಿ ಬಟ್ಟೆ ಸಾಲದೆ ನರಳುವುದು ಮುಂತಾದ ಹಲವು ದುರಂತಗಳು ಸಂಭವಿಸುವುವು. ಎರಡನೆಯದು ಮತ್ತೂ ಭಯಂಕರದ್ದಾಗಿದೆ. ಅದರಿಂದಲೇ ನಾವು ಒಂದನೆಯದನ್ನು ಮರೆಯಲಾರೆವು.

ಈ ಆಹಾರ ನಿಯಂತ್ರಣವೆಂಬುದು ಕಳೆದ ಮಹಾಯುದ್ಧ ನಮಗೆ ಕೊಟ್ಟು ಹೋದ ಕೆಟ್ಟ ಆಸ್ತಿ. ಬಹು ದೊಡ್ಡ ಪರಿಮಾಣದಿಂದ ಕಾಳು ಕಡಿ ಮೊದಲಾದ ಇತರ ಆಹಾರ ಧಾನ್ಯಗಳನ್ನು ನಿರ್ಯಾತ ಮಾಡಲಾಗುತ್ತಿದ್ದುದರಿಂದ ಆಗ ನಿಯಂತ್ರಣ ಅವಶ್ಯಕವಿತ್ತು. ಈ ಅಸ್ವಾಭಾವಿಕವಾದ ನಿರ್ಯಾತವು ಬಹುಶಃ ಕೃತಕ ಪ್ರಯತ್ನ ಹೆಚ್ಚು ಮಾಡಬಲ್ಲುದಲ್ಲದೆ ಅದರಿಂದ ಎಷ್ಟೇ ಸದೋಷವೆನಿಸಿದ್ದರೂ ರೇಶನಿಂಗ ಪದ್ಧತಿಯನ್ನು ಜಾರಿಗೆ ತರಲೇಬೇಕಾಗುವುದು. ಈಗ ನಾವು ನಿರ್ಯಾತಮಾಡಕೂಡದು, ಹಾಗೆ ಬಯಸಿದರೂ ಅದನ್ನು ತಪ್ಪಿಸಲಾಗದು. ಆಹಾರದ ರೂಪದಲ್ಲಿ

ಬಿರ್ಲಾ ಭವನ, ಹೊಸದಿಲ್ಲಿ, ೪—೧೧—೪೭

### ಸಿಟ್ಟಿನ ಮರಿ

(ಗಾಂಧಿಯವರು ಪ್ರಾರ್ಥನೆ ಪ್ರಾರಂಭಿಸುವ ಮುನ್ನ ಮಾತಿಗಾರಂಭಿಸಿ) ವಿನೀತನಾದ ಹಳೆಯ ಗೆಳೆಯನು ಆಗಲೇ ಹೇಳಿದಂತೆ ಕುರಾನ ಪಠನವನ್ನು ವಿರೋಧಿಸಲಿದ್ದುದೊಂದನ್ನು ಬಿಟ್ಟರೆ ಮತ್ತಾರೂ ಹಾಗೆ ಮಾಡಿಲ್ಲವಾದರೂ ಬಹಳ ತಲ್ಲಣಗೊಂಡ ಪಂಜಾಬಿ ಹಿಂದು ನಿರಾಶ್ರಿತನೊಬ್ಬನು ಬರೆದ ಕರುಣಾಜನಕ ಕಾಗದದಲ್ಲಿಯ ಪ್ರತಿಭಟನೆಯನ್ನು ವಿಮರ್ಶಿಸೋಣ. ಈ ಲೇಖಕನು ಈ ಸಭೆಯಲ್ಲಿದ್ದಾನೋ ಇಲ್ಲವೋ ಗೊತ್ತಿಲ್ಲ. ಅವನು ಇಲ್ಲಿರಲಿ, ಇರದಿರಲಿ— ಈ ಕಾಗದವನ್ನು ಬಹಳ ಸಂಕಟದಿಂದ ಬರೆದುದಾದ್ದರಿಂದ ನಾನು ಇದನ್ನು ಅಲಕ್ಷ್ಯ ಮಾಡಲಾರೆ. ಇದರಲ್ಲಿ ತಕ್ಕ ಮಟ್ಟಿಗೆ ವಾದಬಲ್ಲಿಯಿದೆ. ಆದರೆ ಸಿಟ್ಟಿನಿಂದ ಉಂಟಾದ ಅಜ್ಞಾನ ಬಹಳವಾಗಿದೆ. ಇದರ ಪ್ರತಿಯೊಂದು ಸಾಲಿನಲ್ಲೂ ಸಿಟ್ಟು ಸಿಡಿಮಿಡಿಗೊಳ್ಳುತ್ತಿದೆ. ನನ್ನ ವೇಳೆಯೆಲ್ಲ ಹಿಂದು, ಸೀಖ ಮತ್ತು ಸ್ಥಳೀಯ ಮುಸಲ್ಮಾನ ನಿರಾಶ್ರಿತರ ಕರುಣ ಕಥೆಯನ್ನು ಕೇಳುವುದಕ್ಕಾಗಿಯೇ ವಿನಿಯೋಗಿಸಲ್ಪಡುತ್ತದೆ. ನನ್ನ ಹೃದಯ ಕರಗಿದೆ, ನೊಂದಿದೆ. ಅದರಿಂದ ನಾನು ಭಾವನಾವಶನಾದರೆ ಅದು ಅಹಿಂಸೆಯ ಆಚರಣೆಯಲ್ಲ. ಅದರಿಂದ ಸಂಧ್ಯಾವಂದನೆ ಮಾಡುವುದು, ಉಣ್ಣುವದು, ಮಲಗುವುದು ಇವಾವನ್ನೂ ಮಾಡದೆ ನಾನು ಸದಾ ಅಳುತ್ತಿರಬೇಕಾದೀತು. ಆದರೆ ಪರಿಯಾದಿಯಿಂದಲೂ ನಾನು ನನಗೆದುರಾದ ದುಃಖದ ಸಂಗತಿಗಳ ಬಗ್ಗೆ ಅಳದಿರುವಂತೆ ಅಹಿಂಸೆಯ ತರಬೇತಿ ಹೊಂದಿದ್ದೇನೆ. ಹೃದಯವನ್ನು ಕಲ್ಲು ಮಾಡಿಕೊಂಡು ಸಂಕಟಗಳೊಡನೆ ಕಾಳಗ ಹೂಡಲು ಶಕ್ತನಾಗಿದ್ದೇನೆ. ಅಹಿಂಸಾಪೂರ್ಣನು 'ವಜ್ರಾದಪಿ ಕಠೋರ'ನೂ 'ಕುಸುಮಾದಪಿ ಮೃದು'ವೂ ಇರುವನೆಂಬ ಋಷಿವಾಣಿಯನ್ನು ನೀವರಿಯಿರೆ? ಈ ಬುದ್ಧಿವಾದಕ್ಕನುಗುಣವಾಗಿ ನಡೆದುಕೊಳ್ಳಲು ನಾನು ಪ್ರಯತ್ನಿಸತಕ್ಕವನು. ಅದ್ದರಿಂದ ಇಂತಹ ದೂರುಗಳನ್ನು, ಭೆಟ್ಟಿಗೆ ಬಂದವರು ಕಥನ ಮಾಡಿದ ತಮ್ಮ ದುಃಖದನುಭವಗಳನ್ನು ಕೇಳಿದಾಗ ನನ್ನೆದೆಯನ್ನು ನಾನು ಕಲ್ಲಾಗಿ ಮಾಡಿಕೊಂಡು ಇಂದಿನ ಸಮಸ್ಯೆಯೊಡನೆ ದ್ವಂದ್ವಕ್ಕಿಳಿಯಬೇಕು. [ಕಾಗದ ಉರ್ದುವಿನಲ್ಲಿತ್ತು. ಶ್ರೀ ಬ್ರಿಜಕೃಷ್ಣ ಚಾಂದಿವಾಲರನ್ನು ಕುರಿತು ಗಾಂಧಿಯವರು ಕಾಗದದಲ್ಲಿಯ ಮುದ್ದೆಗಳನ್ನು ಬರೆದುಕೊಳ್ಳ ಹೇಳಿದರು.)

### ಅರ್ಧಸತ್ಯ ಮತ್ತು ಅಸತ್ಯ

ಮೊದಲನೆಯದಾಗಿ ನಾನು ಮಾತಿಗೆ ತಪ್ಪಿದೆನೆಂಬುದು. ಯಾವನಾದರೊಬ್ಬ ವಿರೋಧ ಪ್ರದರ್ಶನ ಮಾಡಿದರೆ ಅದರಿಂದ ನೀವು ಆ ಸಂಜೆಯ ಪ್ರಾರ್ಥನೆಯನ್ನೇ ನಿಲ್ಲಿಸಿಬಿಡುವೆನೆಂದು ಹೇಳಿದ್ದಿಲ್ಲವೆ? ಎಂದು ಕೇಳಲಾಗಿದೆ. ಇದು ಅರ್ಧಸತ್ಯ; ಸಂಪೂರ್ಣ ಅಸತ್ಯಕ್ಕಿಂತಲೂ ಅಪಾಯಕಾರಕವಾದುದು. ಮೊದಲ ಸಲ ಪ್ರಾರ್ಥನಾ ಸಭೆಯನ್ನು ನಿಲ್ಲಿಸಿದಾಗ ವಿರೋಧಕನನ್ನು ಸಭಿಕರು ಮುತ್ತಿ ಹಿಂಸೆಗೆ ಗುರಿಪಡಿಸಿಯಾರೆಂಬ ಭಯದಿಂದ ಹಾಗೆ ಮಾಡಬೇಕಾಯಿತೆಂದು ಸಾರಿದ್ದೆ. ಇದು ಬಹಳ ತಿಂಗಳುಗಳ ಹಿಂದೆ. ಆ ಬಳಿಕ ಸಭಿಕರು ಆತ್ಮಸಂಯಮವನ್ನು ಕಲಿತಿದ್ದರೆ ಮತ್ತು ಸಭಿಕರು ವಿರೋಧ ಅಥವಾ ಸಿಟ್ಟನ್ನು ವಿರೋಧಿಯ ಮೇಲೆ ತಾಳುವದಿಲ್ಲವೆಂದು ವಚನಕೊಟ್ಟ ನಂತರ ಸಾರ್ವಜನಿಕ ಪ್ರಾರ್ಥನೆಯನ್ನು ನೆರವೇರಿಸಲೊಪ್ಪಿದೆ. ಫಲಿತಾಂಶವು ಕ್ಷೇಮಕರವಾಗಿತ್ತು. ವಿರೋಧಕರು ತಮ್ಮ ನಡತೆಯಲ್ಲಿ ಬಹಳ ವಿಪರೀತರಾಗಿದ್ದಾರೆ ಮತ್ತು ತಮ್ಮ ವಿರೋಧವನ್ನು ನನ್ನ ಗಮನಕ್ಕೆ ತರುವುದಕ್ಕಿಂತ ಹೆಚ್ಚಿಗೆಯೇನನ್ನೂ ಅವರು ಮಾಡಿಲ್ಲ, ಆದುದರಿಂದ ಕಾಗದ ಬರೆದವನು, ವಚನಭಂಗವಾಗಿಲ್ಲವಷ್ಟೇ ಅಲ್ಲ, ಫಲಿತಾಂಶವೂ ಇಲ್ಲಿಯವರೆಗೆ ಬಹಳ ಚೆನ್ನಾಗಿದೆಯೆಂಬದನ್ನು ತಿಳಿಯಬೇಕು. ನನಗೆ ತಿಳಿದ ಮಟ್ಟಿಗೆ ನಾನೆಂದೂ ನನ್ನ ದೀರ್ಘ ಸಾರ್ವಜನಿಕ ಜೀವನದಲ್ಲಿ ವಚನಭಂಗ ಮಾಡಿಲ್ಲವೆಂದು ನಿಮಗೆ (ಸಭಿಕರಿಗೆ) ಹೇಳಬಲ್ಲೆ.

ಬೈಬಲ್ಲನ್ನು ಹೇಳದೆ ಕುರಾನನ್ನು ಮಾತ್ರ ನಾನು ಹೇಳಿದ್ದನ್ನು ಕಾಗದದಲ್ಲಿ ವಿರೋಧಿಸಲಾಗಿದೆ. ಇಲ್ಲಿ ಕೂಡ ಬರಹಗಾರನು ಅಜ್ಞಾನದಲ್ಲಿದ್ದಾನೆ. ಪ್ರಾರ್ಥನೆಯ ಪದ್ಯಗಳೆಲ್ಲ ಹೇಗೆ ಆರಿಸಲ್ಪಟ್ಟಿವೆ. ಎಂಬುದು ಅವನಿಗೆ ಗೊತ್ತಿಲ್ಲ. ನಾನು ಎಷ್ಟೊ ಸಲ ಹೇಳಿದ್ದ; ಭಜನೆಗಳನ್ನು ಅನೇಕ ಸಲ ಬೈಬಲ್ಲಿನಿಂದಲೂ ಗ್ರಂಥ ಸಾಹೇಬದಿಂದಲೂ ತೆಗೆದುಕೊಳ್ಳಲಾಗಿದೆ ಎಂದು.

### ಸಿರಿವಂತ ನಿರಾಶ್ರಿತರು

ಮೂರನೆಯದೆಂದರೆ, ಪ್ರಸಿದ್ಧ ಕಾಂಗ್ರೆಸ್ಸಿಗರು ಪಶ್ಚಿಮ ಪಂಜಾಬನ್ನು ಇಲ್ಲವೆ ಪಶ್ಚಿಮ ಪಾಕಿಸ್ತಾನದ ಯಾವದಾದರೊಂದು ಭಾಗವನ್ನು ಬಿಟ್ಟು ಹೊರಟು ನಿರಾಶ್ರಿತರಂತೆ ಕಷ್ಟದಿಂದ ಬದುಕದೆ ಪಾಕಿಸ್ತಾನದಲ್ಲಿ ಅವರಿಗಿದ್ದುದಕ್ಕಿಂತ ಉತ್ತಮತರದ ಅರಮನೆಯಂತಹ ಬಂಗಲೆಗಳಲ್ಲಿ ವಾಸಮಾಡುತ್ತಾರೆ. ಅವರು ನಿರಾಶ್ರಿತರಿಂದ ದೂರದಲ್ಲಿ ಏಕಾಕಿಯಾಗಿ ಜೀವಿಸಿದರು. ನಿರಾಶ್ರಿತರಿಗೆ ನೀರಿಲ್ಲ, ನೆರಳಿಲ್ಲ, ಹೊಟ್ಟೆಗಿಲ್ಲ, ಬಟ್ಟೆಗಿಲ್ಲ! ಈ ದೂರು ನಿಜವಾಗಿದ್ದರೆ ಇದು ಅತ್ಯಂತ ಹೀನ ಪ್ರವೃತ್ತಿಯನ್ನು ತೋರಿಸುತ್ತದೆ. ಬಡನಿರಾಶ್ರಿತರ ಸುಖ ದುಃಖಗಳೊಡನೆ ಬೆರಕೆಹೊಂದದೆ ದೂರವಿರುವ ಸಿರಿವಂತ ನಿರಾಶ್ರಿತರನ್ನು ನಾನು ಎಷ್ಟೋ ಬಾರಿ ತೆಗಳಿದ್ದೇನೆ.

### ದಿಲ್ಲಿಯಲ್ಲಿ ಕರ್ತವ್ಯ

ಪಾಕಿಸ್ತಾನಕ್ಕೆ ಹೋಗುತ್ತೇನೆಂದು ಹೇಳಿ ಹೋಗದೆ ಉಳಿದದ್ದು ನನ್ನ ತಪ್ಪೆಂದು ಬರೆಯಲಾಗಿದೆ. ಮುಸಲ್ಮಾನ ಗೆಳೆಯರನ್ನಲ್ಲದೆ ಹಿಂದು ಸೀಖಗೆಳೆಯರನ್ನು ಮೇಲೆತ್ತಲು ನಾನೇಕೆಹೊರಟಿಲ್ಲವೆಂದು ಕೇಳಲಾಗಿದೆ. ದಿಲ್ಲಿಯಲ್ಲಿ ನನ್ನ ಕರ್ತವ್ಯ ಮುಗಿಯದೆ ಪಾಕಿಸ್ತಾನಕ್ಕೆ ನಾನು ಹೋಗಲಾರೆನೆಂಬುದು ಬರಹಗಾರನಿಗೆ ಗೊತ್ತಿಲ್ಲ. ನಾನು ಹಿಂದು ಸೀಖರಿಗೆ ಗೆಳೆಯನಾದ್ದರಿಂದ ಮುಸಲ್ಮಾನರಿಗೂ ಗೆಳೆಯನು. ಇಂಥವರಿಗೇ ಎಂದು

—ಅ ನೇ ಫಟಕೆ

# ಗಾಂಧಿಯವರ ಪ್ರಾರ್ಥನೋತ್ತರ ಭಾಷಣ

(೬ ನೇ ಪುಟದಿಂದ ಮುಂದರಿದುದು)

ಪ್ರತ್ಯೇಕವಾಗಿ ಸಲ್ಲಿಸುವುದು ನನ್ನಿಂದಾಗದು. ನಾನು ಮುಸ್ಲಿಮರ ಗೆಳೆಯನೆಂಬುದು ಸಹಜ. ನಾನು ಒಬ್ಬ ಮುಸ್ಲಿಮನನ್ನು ಸೇವಿಸಿದರೂ ಅದು ಒಂದು ದೇಶವಾದ ಭಾರತದ ಇಲ್ಲವೆ ಭಾರತೀಯ ವ್ಯಕ್ತಿಗೆಂದಾಗಲಿ, ಒಂದು ಧರ್ಮಕ್ಕಾಗಿಯೆಂದಾಗಲಿ ಆಗದು. ಆದೊಬ್ಬ ವಿಶ್ವಪ್ರಜೆಗೆ ಎಂದು ತಿಳಿಯಬೇಕು. ದಿಲ್ಲಿಯ ಹಿಂದುಶೀಖರೇ-ನಿರಾಶ್ರಿತರು ಮತ್ತು ಇತರರೇ ದಿಲ್ಲಿಯ ಮುಸ್ಲಿಮರಿಗೆ ಗೆಳೆತನದೋರಿ ನಾನು ಇಲ್ಲಿರುವದು ಅನಗತ್ಯವೆನಿಸಬೇಕು. ಅನಂತರ ನಾನು ಸಂಪೂರ್ಣ ಧೈರ್ಯದಿಂದ ಪಾಕಿಸ್ತಾನಕ್ಕೆ ಹೋಗುವಂತೆ ನೋಡುವುದು-ಹೋದರೆ ನನ್ನ ಕೆಲಸ ಸಫಲವಾಗುವುದೆಂಬ ಆತ್ಮವಿಶ್ವಾಸ ನನಗಿದೆ.

## ಆಪಾದನೆಗಳಿಗೆ ಉತ್ತರ

ಹೊರು ತಂದವನು ಕಸ್ತೂರಬಾ ಫಂಡನ್ನು ಕೂಡ ಸುಮ್ಮನೆ ಬಿಟ್ಟಿಲ್ಲ. ಕಸ್ತೂರಬಾ ಫಂಡೇನಾಯಿತು, ನಿರಾಶ್ರಿತರಿಗಾಗಿ ಅದನ್ನೇಕೆ ಬಳಸಬಾರದೆಂದು ಅವನು ಕೇಳುತ್ತಾನೆ. ಮೊದಲನೆಯದಾಗಿ ಆ ಫಂಡು ನಾನು ಜೈಲಿನಲ್ಲಿದ್ದಾಗ ಒಂದು ವಿಶಿಷ್ಟ ಉದ್ದೇಶಕ್ಕಾಗಿ ಕೂಡಿಸಿದ್ದು- ಅಂದರೆ ಭಾರತದ ಹಳ್ಳಿಗಳಲ್ಲಿರುವ ಹೆಂಗಸರು ಮಕ್ಕಳ ಸೇವೆಗೆಂದು. ಅದಕ್ಕೆ ಒಂದು ವಿಶ್ವಸ್ತ ಮಂಡಲವಿದೆ. ಅದಕ್ಕೆ ಸದಾ ಎಚ್ಚತ್ತ ಠಕ್ಕರಬಾಪಾ ಅವರು ಕಾರ್ಯದರ್ಶಿಗಳು. ಅದರ ಲೆಕ್ಕವನ್ನು ಸರಿಯಾಗಿ ಇಡಲಾಗಿದೆ; ಜನರು ಬೇಕಾದರೆ ನೋಡ್ರಿಕೊಂಡು ಹೋಗಬಹುದು. ಆದುದರಿಂದ ಅದನ್ನು ಬೇರೆ ಯಾವ ಕಾರ್ಯಕ್ಕೂ ಉಪಯೋಗಿಸಲಸಾಧ್ಯ. ಹಣವನ್ನು ಜನರು ಉದಾರವಾಗಿ ಕೊಟ್ಟಿರುತ್ತಾರೆ. ಹೊದಿಕೆಗಾಗಿ ಮಾಡಿದ ನನ್ನ ಸಣ್ಣ ಕೇಳಿಕೆಗೆ ಎಂತಹ ಉದಾರ ಪ್ರತಿಕ್ರಿಯೆ ಉಂಟಾಯಿತೆಂಬುದನ್ನು ಎಲ್ಲರೂ ಬಲ್ಲರು; ಸರದಾರ ಪಟೇಲರು ಒಂದು ವಿಶೇಷ ಬಿನ್ನಹ ಮಾಡಿಕೊಂಡಿದ್ದರು. ಅದಕ್ಕೆ ಇನ್ನೂ ಉದಾರ ಕೃತಿಯ ಉತ್ತರಗಳು ಬರುತ್ತಲೇ ಇವೆ.

## ಹಂದಿಗಳನ್ನು ಕಡಿಯುವದು

ಕಡೆಯದಾಗಿ, ಪಾಕಿಸ್ತಾನದಲ್ಲಿ ಹಂದಿ ಕೊಲ್ಲುವುದನ್ನು ನಿಲ್ಲಿಸಿರುವಾಗ ಹಿಂದುಸ್ತಾನದಲ್ಲೇಕೆ ಗೋಹತ್ಯೆಯನ್ನು ನಿಲ್ಲಿಸಬಾರದು? ಎಂದು ಕೇಳಲಾಗಿದೆ. ಕಾಯದೆಯಂತೆ ಹಂದಿ ಕೊಲ್ಲಬಾರದೆಂದು ಪಾಕಿಸ್ತಾನದಲ್ಲಿ ನಿಯಮವಿದೆಯೆಂಬುದು ನನಗೆ ಗೊತ್ತಿಲ್ಲ. ಹೊರು ನಿಜವೇ ಆದರೆ ನಾನು ನಿಜವಾಗಿ ವ್ಯಸನಪಡುತ್ತೇನೆ. ಹಂದಿಯ ಮಾಂಸವು ಇಸ್ಲಾಮು ಕಾಯದೆಯಲ್ಲಿ ನಿಷೇಧಿಸಲ್ಪಟ್ಟದೆಯೆಂಬುದು ನನಗೆ ಗೊತ್ತಿದೆ. ಹಾಗಿದ್ದರೂ ಉಳಿದವರೇಕೆ ಉಪಯೋಗಿಸಬಾರದೆಂಬುದು ನನಗೆ ತಿಳಿಯದಾಗಿದೆ.

## ಪಾಕಿಸ್ತಾನವು ಧಾರ್ಮಿಕ ರಾಜ್ಯವೆ?

ಪಾಕಿಸ್ತಾನವು ಧಾರ್ಮಿಕ ರಾಜ್ಯವಲ್ಲ, ಅದೊಂದು ಲೌಕಿಕ ರಾಜ್ಯ ಎಂದು ಕಾಯದೆ ಅಜಮರು ಹೇಳಿಲ್ಲವೆ? ಆದರೆ ಆ ಮಾತನ್ನು ನಾವಿಂದು ಕಾರ್ಯದಲ್ಲಿ ಕಾಣಲಾರೆವು- ಇದು ದುರದೃಷ್ಟವಶಾತ್ ಸತ್ಯದ ಸಂಗತಿಯೆನಿಸಿದೆ. ಹಿಂದುಸ್ತಾನ ಕೂಡ ಹಾಗೇ ಧಾರ್ಮಿಕ ರಾಜ್ಯವಾಗಬೇಕೇ? ಹಿಂದು ಧರ್ಮದ ತತ್ವಗಳನ್ನು ಉಳಿದವರ ಮೇಲೆ ಹೇರಬೇಕೇ? ನಾನು ಒಪ್ಪಲಾರೆ. ಹಾಗೆ ಮಾಡಿದರೆ ಹಿಂದುಸ್ತಾನವೊಂದು ಆಶೆಯ, ಭರವಸೆಯ ನಾಡೆಂಬುದು ಅಲ್ಲವಾದೀತು. ಏಶಿಯ ಮತ್ತು ಆಫ್ರಿಕದ ಕುಲಗಳು- ಅಷ್ಟೇ-ಏಕೆ-ಇಡೀ ಜಗತ್ತೇ ಅದರಿಂದ ನಿರಾಶವಾದೀತು. ಹಿಂದುಸ್ತಾನದ ರೂಪದಲ್ಲಾಗಲಿ, ಪಾಕಿಸ್ತಾನದ ರೂಪದಲ್ಲಾಗಲಿ, ಭಾರತದಿಂದ ಸಣ್ಣತನ ಮತ್ತು ಧರ್ಮಾಂಧತೆಗಳನ್ನು ಜಗತ್ತು ನಿರೀಕ್ಷಿಸಿದ್ದಿಲ್ಲ. ಇಂದಿನ ಅಂಧಕಾರದಲ್ಲಿ ಅದು ಭಾರತವು ತನಗೆ ಪಾಠ ಕಲಿಸಿ, ಬೆಳಕನ್ನಿತ್ತು ಧೀರೋದಾತ್ತವಾಗಿ ವರ್ತಿಸಬೇಕೆಂದು ನಿರೀಕ್ಷಿಸಿದೆ.

## ದನಕರುಗಳನ್ನು ನಡೆಸಿಕೊಳ್ಳುವುದು

ಭಕ್ತಿಯಿಂದ ಗೋವನ್ನು ಪೂಜಿಸುವುದರಲ್ಲಿ ನಾನು ಯಾರಿಗೂ ಮಣಿದವನಲ್ಲ; ಆದರೆ ಆ ಭಕ್ತಿ ಕಾಯದೆಯಿಂದ ಹೇರಿದ್ದಾಗಬಾರದು. ಅದು ಸರಿಯಾದ ನಡತೆಯಿಂದಲೂ ಮುಸಲ್ಮಾನರೇ ಮೊದಲಾದ ಹಿಂದುಗಳೊಡನೆ ಸ್ನೇಹ ಬೆಳೆಸುವುದರಿಂದಲೂ ಸಾಧ್ಯವಾಗುತ್ತದೆ. ಗೋರಕ್ಷಣೆಯಾಗಬೇಕೆನ್ನುವವರಲ್ಲಿ ಗುಜರಾಥಿಗಳೂ ಮಾರವಾಡಿಗಳೂ ಅಗ್ರಗಣ್ಯರೆಂದು ಹೇಳಲಾಗುತ್ತದೆ; ಆದರೆ ಅವರು ಹಿಂದು ಧರ್ಮದ ಆಜ್ಞೆಗಳನ್ನು ಇಲ್ಲಿಯ ವರೆಗೆ ಮರೆತುಬಿಟ್ಟು ಇತರರ ಮೇಲೆ ನಿರ್ಬಂಧವನ್ನು ಸಂತೋಷದಿಂದ ಹಾಕಿ ತಾವು ಸ್ವತಃ ಹಸು ಮತ್ತು ಅದರ ಕರುಗಳನ್ನು ಸಂಪೂರ್ಣವಾಗಿ ಕೆಟ್ಟ ರೀತಿಯಿಂದ ನಡೆಸಿಕೊಳ್ಳುತ್ತಿದ್ದಾರೆ. ಹಿಂದುಸ್ತಾನದ ದನಕರುಗಳೇಕೆ ಅಷ್ಟು ಅಶಕ್ತವೆನಿಸಿವೆ? ಜಗತ್ತಿನಲ್ಲೆಲ್ಲ ಕಡಿಮೆ ಹಾಲು ಕೊಟ್ಟು ಭೂಮಿಗೆ ಭಾರವೆನಿಸಿ ಅವು ಇರಲು ಕಾರಣವೇನು? ಹೊರಹೊರುವ ಪ್ರಾಣಿಗಳೆನಿಸಿದ ಅವನ್ನೇಕೆ ಕೆಟ್ಟ ರೀತಿಯಿಂದ ನಡೆಸಿಕೊಳ್ಳುತ್ತಾರೆ?

ನಮ್ಮ ಪಿಂಜರಾಪೋಲುಗಳು ಹೆಮ್ಮೆಯ ಸಂಸ್ಥೆಗಳೆನಿಸಿಲ್ಲ. ಬಹಳ ಹಣ ಅವುಗಳ ಮೇಲೆ ಹಾಕಿವೆ. ಆದರೆ ವೈಜ್ಞಾನಿಕ ಮತ್ತು ವಿಚಾರಪೂರ್ಣವಾದ ಬಗೆಯಿಂದ ಪಶುಗಳನ್ನು ಅಲ್ಲಿ ಸಾಕುತ್ತಿಲ್ಲ. ಅವು ಎಂದೂ ಭಾರತದ ದನಕರುಗಳ ಪುನರುಜ್ಜೀವನವನ್ನು ಮಾಡಲಾರವು. ದನಕರುಗಳನ್ನು ದಯಾಮಯ ದೃಷ್ಟಿಯಿಂದ ನಡೆಸಿಕೊಳ್ಳುವುದರಿಂದ ಮಾತ್ರ ಹಾಗೆ ಮಾಡಲು ಸಾಧ್ಯ. ನಾನು ಮುಸಲ್ಮಾನರ ಗೆಳೆಯನಾಗಿರುವುದರಿಂದ ಕಾಯದೆಯ ಸಹಾಯವಿಲ್ಲದೆ ಉಳಿದ ಎಲ್ಲರಿಗಿಂತ ಹೆಚ್ಚಾಗಿ ಕಟುಕರ ಕೈಯಿಂದ ಹಸುಗಳನ್ನು ಉಳಿಸಿದ್ದೇನೆ.

ಬಿರ್ಲಾ ಭವನ, ಹೊಸದಿಲ್ಲಿ, ೫—೧೧—೪೭

## ಹರಿಜನನ ಸುಧಾರಣೆ

(ಯಥಾ ಪೂರ್ವ ವಿನೀತ ವಿರೋಧಕನೊಬ್ಬನಲ್ಲದೆ ಮತ್ತಾರೂ ವಿರೋಧಿಸದಿದ್ದುದರಿಂದ ಪ್ರಾರ್ಥನೆಯು ಗಾಂಧಿಯವರ ಮುನ್ನುಡಿಯಿಲ್ಲದೆ ಸಾಗಿತ್ತು. ಕಿಂಗ್ಸ್‌ವೇನಲ್ಲಿರುವ ಹರಿಜನ ನಿವಾಸದ ಹರಿಜನನೊಬ್ಬನು ಭಜನೆಯನ್ನು ಹಾಡಿದನು. ಅವನ ಸ್ವರದ ಮೇಲೆ ವ್ಯಾಖ್ಯೆ ಮಾಡುತ್ತ ಗಾಂಧಿಯವರೆಂದರು)

ಸಮಾನಸಂದರ್ಭವನ್ನೊದಗಿಸಿಕೊಟ್ಟರೆ ಹರಿಜನನು ಯಾವ ಸವರ್ಣ ಹಿಂದುವಿಗೂ ಅನ್ಯನಿಗೂ ಹಿಂದಾಗಲಾರದೆಂಬುದು ನನಗೂ ನಿಮಗೂ (ಸಭಿಕರಿಗೂ) ಹರ್ಷದಾಯಕವೆನಿಸದೆ? ಹಾಗೆ ನೋಡಿದರೆ, ಸಂಗೀತ ಮತ್ತು ಕುಶಲ ಕಲೆ, ಮುಂತಾದ ಕೆಲವು ವಿಷಯಗಳಲ್ಲಿ ಸಾಮಾನ್ಯ ಹರಿಜನನು ಉಳಿದವರಿಗಿಂತ ಹೆಚ್ಚು ಸುಧಾರಿಸಿದವನಾಗಿ ತೋರುತ್ತಾನೆ. ಉಳಿದವರಿಗಿಂತ ಹರಿಜನರು ಹೆಚ್ಚು ಪುಣ್ಯಾತ್ಮರೆಂದು ನಾನು ಹೇಳುವದಿಲ್ಲ. ನಾನು ಹೇಳುವುದೆಂದರೆ, ಅಸ್ಪೃಶ್ಯರೆಂದು ಅವರ ಮೇಲೆ ಉಗ್ರ ನಿರ್ಬಂಧ ಹೇರಿದ್ದರೂ ಸರಿಯಾದ ಅವಕಾಶ ಸಿಕ್ಕಲ್ಲಿ ಅವರು ಉಳಿದವರಿಗಿಂತ ಹಿಂದೆ ಬೀಳಲಿಲ್ಲ ಎಂಬುದೇ. ಉಳಿದ ಹಿಂದುಗಳಂತೆ ಹರಿಜನರಿಗೂ ಪುರಾತನವೂ ಪ್ರಸಿದ್ಧವೂ ಆದ ಪಂಡರಪುರ ದೇವಾಲಯವೀಗ ಪ್ರವೇಶವಿತ್ತಿರುವುದು ಮತ್ತೊಂದು ಸಂತೋಷದ ಸಂಗತಿ. ಆದಾಗದಿದ್ದರೆ ಆಮರಣ ಉಪವಾಸ ಮಾಡುವುದಾಗಿ ಸತ್ಯಾಗ್ರಹ ಹೂಡಿದ ಕೀರ್ತಿಯು ಸಾನೆ ಗುರೂಜಿಗೆ ಸೇರಿದ್ದು. ಅವರು ತೆಗೆದುಕೊಂಡು ಯುಕ್ತಕ್ರಮಕ್ಕಾಗಿ ಪಂಡರಪುರದ ದೇವಾಲಯದ ವಿಶ್ವಸ್ತ ಮಂಡಲದವರಿಗೂ ಇತರರಿಗೂ ನಾನು ಧನ್ಯವಾದಗಳನ್ನರ್ಪಿಸುತ್ತೇನೆ. ಹಾಹಾ ಎನ್ನುವಷ್ಟರಲ್ಲಿ ಅಸ್ಪೃಶ್ಯತೆಯ ಕುರುಹು ನಿನ್ನೆಗೆ ಸೇರಿಹೋಗುವುದೆಂದು ನನ್ನ ಭರವಸೆ. ಭಾರತದ ಎರಡೂ ಭಾಗಗಳನ್ನು ಆಕ್ರಮಿಸಿದ ಜಾತೀಯ ವಿಷವನ್ನು ಉಚ್ಚಾಟನೆ ಮಾಡಲು ಅಂಥ ಕ್ರಮ ಬಹಳ ಮಟ್ಟಿಗೆ ಸಹಕಾರಿಯಾಗಿದೆ.

## ಸಸ್ಯಾಹಾರ ಪ್ರಚಾರ ಕ್ರಮ

(ಟಪಾಲು ಮೂಲಕ ಬಂದ ಹಲವು ಪ್ರಶ್ನೆಗಳನ್ನು ಗಾಂಧಿಯವರು ಬಿಡಿಸಿದರು. ಒಬ್ಬ ಮುಸಲ್ಮಾನ ಗೆಳೆಯನು ವಿನಾನು ಕುರಿ ಮಾಂಸಗಳನ್ನು ಕೂಡ ತಿನ್ನಬಾರದೆಂದು 'ಸುತ್ತಲಿನ ಒಕ್ಕೂಟ ಪ್ರಜೆಗಳು ಒತ್ತಾಯಪಡಿಸುತ್ತಿರುವರೆಂದು ಬರೆದಿದ್ದ. ಅದಕ್ಕೆ ಗಾಂಧಿಯವರು ಹೀಗೆಂದರು.)

ನನಗೆ ಅಂತಹ ಅಸಹನೆ ಮತ್ತು ಸಂಕುಚಿತ ಮನೋವೃತ್ತಿಯ ಬಗ್ಗೆ ಸಹನೆಯಿಲ್ಲ. ಧಾರ್ಮಿಕ ಶ್ರದ್ಧೆಯಿಂದ ಸಸ್ಯಾಹಾರಿಗಳೆನಿಸಿದವರು ಭಾರತದಲ್ಲಿ ಬಹು ವಿರಳ. ಭಾರಿತ ಉದ್ದಗಲಕ್ಕಿರುವ ಬಹುಸಂಖ್ಯಾತ ಹಿಂದುಗಳು ಸಿಕ್ಕಿದಲ್ಲಿ ಮೀನು ಮಾಂಸ, ಕೋಳಿಗಳನ್ನು ತಿನ್ನಲು ಹಿಂದೆಗೆಯುತ್ತಿಲ್ಲ. ಮುಸಲ್ಮಾನರ ಮೇಲೆ ತಮ್ಮ ಕಟ್ಟಳೆಯನ್ನು ಹೇರಲು ಸಸ್ಯಾಹಾರಿಗಳಿಗಾವ ಅಧಿಕಾರವಿದೆ? ಮಾಂಸಹಾರಿಗಳಾದ ಹಿಂದುಗಳ ಮೇಲೆ ಆ ಕಟ್ಟಳೆಯನ್ನು ಹೇರಲು ಅವರಿಗೆ ಧೈರ್ಯವಿಲ್ಲ. ಇದೆಲ್ಲ ಬರೀ ಹುಚ್ಚು. ತಮ್ಮ ಜೀವನದಲ್ಲಿ ಆಚರಿಸಿ ತೋರಿಸಲಾಗುವ ಸಸ್ಯಾಹಾರ ಸೌಂದರ್ಯವನ್ನು ವಿವರಿಸಿ ಹೇಳುವುದು ಸರಿಯಾದ ಪ್ರಚಾರ ಮಾರ್ಗ. ಇನ್ನೊಬ್ಬರನ್ನು ನಮ್ಮ ಅಭಿಪ್ರಾಯದ ಕಡೆಗೆಳೆಯಲು ಬೇರಾವ ರಾಜಮಾರ್ಗವೂ ಇಲ್ಲ.

## ಅಹಿಂಸೆಯಬಗ್ಗೆ ಅಚಲತೆ

“ಚರ್ಚಿಲ, ಹಿಟ್ಲರ, ಮುಸಲೋನಿ ಮತ್ತು ಜಪಾನಿಗಳು ತಮ್ಮ ಸರ್ವಸ್ವವನ್ನೂ ಕಳೆದುಕೊಳ್ಳುವ ಸಂದರ್ಭ ಒದಗಿದಾಗ ಅವರಿಗೆ ನೀವು ಅಹಿಂಸೆಯನ್ನು ಅವಲಂಬಿಸಲು ಹೇಳುವ ಸಾಹಸ ಮಾಡಿದಿರಿ. ಆದರೆ ಕಾಂಗ್ರೆಸ ಸರಕಾರವು ಕಾಶ್ಮೀರಕ್ಕೆ ಶಸ್ತ್ರ ಸಜ್ಜಿತ ಸೈನ್ಯವನ್ನು ಕಳಿಸುವಾಗ ಈ ಅಹಿಂಸಾಬೋಧವನ್ನೇಕೆ ನೀವು ಮಾಡಲಿಲ್ಲ! ಶಸ್ತ್ರದಿಂದಲ್ಲದಿದ್ದರೆ ಅಹಿಂಸೆಯಿಂದ ಪುಂಡರನ್ನು ಕಾಶ್ಮೀರ ವಾಸಿಗಳು ಅದು ಹೇಗೆ ಹತ್ತಿಕ್ಕಬಹುದಿತ್ತು ಎಂಬುದನ್ನು ನೀವು ನಿರ್ದಿಷ್ಟವಾಗಿ ಹೇಳಬಲ್ಲಿರಾ” ಎಂದು ಮುಂತಾಗಿ ಇನ್ನೋರ್ವರು ನನಗೆ ಚುರುಕಾಗಿ ಬರೆದು ಕೇಳಿದ್ದಾರೆ. ಈ ಪತ್ರ ಬರೆದವರಿಗೆ ಈ ಬಗ್ಗೆ ಇದ್ದ ಅಜ್ಞಾನಕ್ಕಾಗಿ ನನಗೆ ವ್ಯಸನವೆನಿಸುತ್ತದೆ. ಅಹಿಂಸೆಯ ಬಗ್ಗೆ ಹಿಂದೀ ಒಕ್ಕೂಟದಲ್ಲಿದ್ದ ಅಧಿಕಾರಿಗಳ ಮನವೊಲಿಸುವಷ್ಟು ಪ್ರಭಾವ ನನ್ನಲ್ಲಿಲ್ಲವೆಂಬುದನ್ನು ನಾನು ಪದೇ ಪದೇ ಹೇಳಿದ್ದು ನಿಮ್ಮೆಲ್ಲರಿಗೆ ಗೊತ್ತಿರಬೇಕು. ನಾನೇನೋ ಅಹಿಂಸೆಗೆ ಎಂದಿನಂತೆಯೇ ಗಟ್ಟಿಯಾಗಿ ಅಂಟಿಕೊಂಡಿದ್ದೇನೆ.

ಹಿಂದೀ ಒಕ್ಕೂಟದ ಮಂತ್ರಿಗಳು ನನ್ನ ನಿಕಟದ ಸ್ನೇಹಿತರಾಗಿದ್ದರೂ ನನ್ನ ನಂಬಿಕೆಗಳನ್ನು ಹೆರರ ಮೇಲೆ ನಾನು ಒತ್ತಾಯದಿಂದ ಹೇರಲಾರೆ. ಅವರು ತಮಗಿದ್ದ ನಂಬಿಕೆಗಳನ್ನು ತೊರೆಯುವರೆಂದು ನಾನೇನು ನಿರೀಕ್ಷಿಸಲಾರೆ. ಅವರ ಮೇಲಿದ್ದ ನನ್ನ ಮೊದಲಿನ ಪ್ರಭಾವವನ್ನು ಕಳೆದುಕೊಂಡಿರುವೆನೆಂದು ನಾನು ಪ್ರಾಂಜಲವಾಗಿ ಒಪ್ಪಿಕೊಳ್ಳುತ್ತೇನೆ. ಇದನ್ನು ನೀವು ಸಂತೋಷದಿಂದ ಸ್ವೀಕರಿಸಬೇಕು.

## ಗುಣನಿರಾಕರಣೆಯಿಲ್ಲ

ಗುಣವಿದ್ದಲ್ಲಿ ಅದನ್ನು ಗ್ರಹಿಸಲೇಬೇಕೆಂದು ನನಗೆ ನನ್ನ ಅಹಿಂಸೆಯು ಕಲಿಸಿದೆ. ಈ/ಗುಣವು ಹಿಂಸೆಯಲ್ಲಿ ನಂಬಿಗೆ ಇದ್ದವರಲ್ಲಿ ತೋರಿಬಂದರೂ ಪರವಿಲ್ಲ. ಎಂದೇ ನಾನು ಸುಭಾಸಬೋಸರ ಗುಣಗಳಿಗೆ ತಲೆದೂಗಿ ಹೊಗಳಿದ್ದೇನೆ. ಅವರು ಹಿಂಸೆಯನ್ನು ನಂಬಿದ್ದರೂ ಅವರ ದೇಶಪ್ರೇಮ, ಅವರ ಕಲ್ಪಕಶಕ್ತಿ ಮತ್ತು ಶೌರ್ಯ ಸಾಹಸಗಳು ಅಸಾಮಾನ್ಯವಾಗಿದ್ದವು. ಇದೇ ಬಗೆಯಾಗಿ, ಒಕ್ಕೂಟದ ಸರಕಾರವು ಕಾಶ್ಮೀರಕ್ಕೆ ಸಶಸ್ತ್ರ ಸಹಾಯ ಸಲ್ಲಿಸಿದ್ದು ಮತ್ತು ಶೇಕ ಅಬ್ದುಲ್ಲಾರು ಈ ಸಹಾಯ ಸ್ವೀಕರಿಸಿದ್ದು ನನಗೆ ಸಮ್ಮತವಿಲ್ಲದಿದ್ದರೂ ತಮ್ಮ ದೇಶವನ್ನು ಉಳಿಸಿಕೊಳ್ಳಲು ಕಾಶ್ಮೀರಿಗಳು ಹಿಂದುಸ್ತಾನದ ಸೈನಿಕರು ತಮ್ಮ ಕೊನೆಯ ರಕ್ತದ ತೊಟ್ಟನ್ನು ಕೂಡ ಹರಿಬಿಡಲು ಸಿದ್ಧರಾದುದಕ್ಕೆ ನಾನು ಅವರನ್ನು ಬಾಯ್ತುಂಬ ಹೊಗಳುತ್ತೇನೆ. ಇವರ ದೇಶಪ್ರೀತಿ ಭಾರತಕ್ಕೆ ಅಲಂಕಾರ ಪ್ರಾಯವಾಗಿದೆ. ಕಾಶ್ಮೀರವನ್ನು ರಕ್ಷಿಸಿಕೊಳ್ಳುವ ಉದ್ದೇಶ ಮತ್ತು ಕೃತಿಗಳಲ್ಲಿ ಕಾಶ್ಮೀರಿಗಳು ಅಹಿಂಸೆಯನ್ನೇ ಅವಲಂಬಿಸಿದ್ದರೆ ಇನ್ನೂ ನೆಟ್ಟಗಿರುತ್ತಿತ್ತು. ಹಾಗೆ ಮಾಡುವದರಿಂದ ಇವರು ಪಾಕಿಸ್ತಾನ ಸರಕಾರದವರನ್ನಾದರೂ ತಮ್ಮ ಅಹಿಂಸಾ ಮಾರ್ಗದತ್ತ ಹೊರಳಿಸಿಕೊಳ್ಳಬಹುದಿತ್ತು.

ಸಂರಕ್ಷಕರಿಗೆ ಸಶಸ್ತ್ರ ಸಹಾಯ ಸಲ್ಲಿಸದಿರುವದೇ ಅಹಿಂಸಾತ್ಮಕ ಸಹಾಯದ ರಹಸ್ಯವಾಗಿದೆ. ಈ ಬಗೆಯ ಅಹಿಂಸಾತ್ಮಕ ಸಹಾಯವನ್ನು ಒಕ್ಕೂಟದವರು ಕಳಿಸಬಹುದಿತ್ತು. ಆದರೆ ಇಂತಹ ಸಹಾಯ ಸಂರಕ್ಷಕರಿಗೆ ಸಿಕ್ಕಿರಲಿ ಬಿಟ್ಟಿರಲಿ ಅವರು ದಾಳಿಗಾರರ ದಲವನ್ನೂ ಸುಸಜ್ಜಿತ ಸಶಸ್ತ್ರ ಸೈನಿಕರನ್ನೂ ಅಹಿಂಸಾತ್ಮಕವಾಗಿಯೇ ಎದುರಿಸಿ ಅವರನ್ನು ತೊಲಗಿಸಬಹುದಿತ್ತು. ಕಾಶ್ಮೀರದ ಈ ಸಂರಕ್ಷರು ವೈರಿಗಳ ಬಗ್ಗೆ ಒಂದಿಷ್ಟೂ ಸಿಟ್ಟಿಲ್ಲದೆ ಹೊಟ್ಟೆಯುರಿಯಿಲ್ಲದೆ ಶಸ್ತ್ರಗಳನ್ನಷ್ಟೇ ಅಲ್ಲ ತಮ್ಮ ಮುಷ್ಟಿಯನ್ನು ಕೂಡ ಎತ್ತದೆ! ತಾವು ನಿಂತಲ್ಲಿಯೇ ಸತ್ತಿದ್ದರೆ ಜಗತ್ತಿನ ಇತಿಹಾಸದಲ್ಲಿ ಯಾರೂ ತೋರದ ಶೌರ್ಯವನ್ನು ಅವರು ತೋರಿದಂತಾಗುತ್ತಿತ್ತು. ಇದರಿಂದ ಕಾಶ್ಮೀರದ ಕೀರ್ತಿ ಪರಿಮಳ ಭಾರತದಲ್ಲಷ್ಟೇ ಅಲ್ಲ ಅಖಿಲ ಬ್ರಹ್ಮಾಂಡದಲ್ಲಿಯೇ ಪಸರಿಸುತ್ತಿತ್ತು. ಗೀತೆಯ ೨ ನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟ ತಪಶ್ಚರ್ಯೆ ನನ್ನಲ್ಲಿ ಇಲ್ಲದಿದ್ದ ಮೂಲಕವೇ ಅಹಿಂಸೆಯ ನನ್ನ ಸಂದೇಶ ಸಫಲವಾಗಿಲ್ಲ. ಈ ತಪೋಬಲವನ್ನು ದೇವರು ನನಗೆ ದಯಪಾಲಿಸಲೆಂದು ನೀವೆಲ್ಲ ನನ್ನೊಡನೆ ಪ್ರಾರ್ಥಿಸುವಿರಾಗಿ ಬೇಡುತ್ತೇನೆ.

ಬಿರ್ಲಾಭವನ, ಹೊಸದಿಲ್ಲಿ,
೬-೧೧-೪೭,

## ನಿಯಂತ್ರಣ ಹೋಗಬೇಕು

ಆಹಾರ ಪರಿಸ್ಥಿತಿಯ ಬಗ್ಗೆ ಅಧಿಕಾರೇತರ ಸಮಿತಿಯವರು ಕೊಟ್ಟ ತೀರ್ಮಾನವನ್ನು ಪರ್ಯಾಲೋಚಿಸಲು ಬೇರೆ ಬೇರೆ ಪ್ರಾಂತಗಳಿಂದ ಬಂದ ಮಂತ್ರಿಗಳನ್ನೂ ಅವರ ಪ್ರತಿನಿಧಿಗಳನ್ನೂ ಕಾಣುವ ಸುಯೋಗ ನನಗೆ ಒದಗಿತು. ಡಾ. ರಾಜೇಂದ್ರ ಪ್ರಸಾದರಿಗೆ ನಿಶ್ಚಿತ ಕಾರ್ಯಕ್ರಮ ಮತ್ತು ಉಪಾಯಗಳನ್ನು ಕೈಕೊಳ್ಳಲು ಮಾರ್ಗದರ್ಶನ ಮಾಡಲು ಇವರು ನೆರೆದಿದ್ದರು. ಇವರೊಡನೆ ಮಾತನಾಡಲು ನನಗೆ ಅವಕಾಶ ಕಲ್ಪಿಸಿಕೊಡುವದಾಗಿ ನಾನು ಡಾ. ರಾಜೇಂದ್ರ ಪ್ರಸಾದರಿಗೆ ನಿಶ್ಚಿತ ಕಾರ್ಯಕ್ರಮ ಮತ್ತು ಉಪಾಯಗಳನ್ನು ಕೈಕೊಳ್ಳಲು ಮಾರ್ಗದರ್ಶನ ಮಾಡಲು ಇವರು ನೆರೆದಿದ್ದರು. ಇವರೊಡನೆ ಮಾತನಾಡಲು ನನಗೆ ಅವಕಾಶ ಕಲ್ಪಿಸಿ ಕೊಡುವದಾಗಿ ನಾನು ಡಾ. ರಾಜೇಂದ್ರ ಪ್ರಸಾದರಿಗೆ ಕೇಳಿಕೊಂಡಿದ್ದೆ. ಆಹಾರದ ಬಗ್ಗೆ ನಾನೊಂದು ನಿಶ್ಚಿತ ಧೋರಣಕ್ಕೆ ಬಂದಿದ್ದು ಈ ಬಗ್ಗೆ ಅವರಲ್ಲಿ[illegible]ದಾದ ಸಂದೇಹಗಳನ್ನು ನಿವಾರಿಸಲು ಅನುವು ಬೇಕೆಂದು ಕೇಳುತ್ತಲೇ ಡಾ. ರಾಜೇಂದ್ರ ಪ್ರಸಾದರು ಒಪ್ಪಿದರು. ಜಾತೀಯ ಕೋಲಾಹಲದ ವಿಷಯದಲ್ಲಿ ನನ್ನ ಅಭಿಪ್ರಾಯಗಳು ತೀರ ಪುರಾತನ ಮತ್ತು ಹಿಂದುಳಿದವುಗಳೆಂದೆನಿಸಿಕೊಂಡರೂ ಆಹಾರ ವಿಷಯಕವಾಗಿದ್ದ ನನ್ನ ವಿಚಾರನಿರ್ಧಾರಕ್ಕೆ ಈ ಬಗೆಯ ಗತಿ ಪ್ರಾಪ್ತವಾಗಿಲ್ಲವೆಂದು ತಿಳಿಸಲು ನನಗೆ ಸಂತೋಷವಾಗುತ್ತದೆ. ಮಿ. ಕೇಸಿಯವರು ಬಂಗಾಲದ ಗವ್ಹರ್ನರರಿರುವಾಗ ಅನೇಕ ಸಲ ಅವರೊಡನೆಗೆ ಚರ್ಚಿಸಿದ್ದೇನೆ. ಅಂದಿನಿಂದಲೂ ಆಹಾರದ ಮೇಲಾಗಲೀ ಬಟ್ಟೆಯಮೇಲಾಗಲಿ ನಿಯಂತ್ರಣವಿರಕೂಡದೆಂದು ನಾನು ವಾದಿಸುತ್ತ ಬಂದಿದ್ದೇನೆ. ಆಗ ಈ ವಿಷಯದಲ್ಲಿ ನನಗೆ ಬೆಂಬಲಿಗರಿರುವರೋ ಇಲ್ಲವೋ ಎಂಬ ಬಗ್ಗೆ ಮನವರಿಕೆಯಾಗಿರಲಿಲ್ಲ. ಆದರೆ ಈಗ ಈ ನನ್ನ ಧೋರಣೆಗೆ ಅಖ್ಯಾತ ಮತ್ತು ವಿಖ್ಯಾತ ಜನನೇತರು ತುಂಬ ಬೆಂಬಲ ಕೊಡುತ್ತಿರುವುದು ನನಗೆ ಕಂಡುಬರುತ್ತಿದೆ. ನನಗೆ ಬರುತ್ತಿರುವ ಅಸಂಖ್ಯಾತ ಪತ್ರಗಳಲ್ಲಿ ಒಂದಾದರೂ ನನ್ನ ಆಹಾರ ಧೋರಣವನ್ನು ವಿರೋಧಿಸುತ್ತಿಲ್ಲ. ಶ್ರೀ ಘನಶ್ಯಾಮದಾಸ ಬಿರ್ಲಾ ಮತ್ತು ಶ್ರೀ ಲಾಲಾ ಶ್ರೀರಾಮ ಇವರಂತಹ ಧನಿಕರ ಅಭಿಮತವು ಈ ಬಗ್ಗೆ ಏನಿದೆಯೋ ನಾನರಿಯೆ. ಸಮಾಜವಾದಿಗಳು ನನ್ನ ಮತಕ್ಕೆ ಅನುಕೂಲರಾಗಿರುವುದೂ ಇದೆ. ಆದರೆ ಒಮ್ಮೆ ಡಾ. ಮನೋಹರ ಲೋಹಿಯಾರವರು ಮಾತ್ರ ಆಹಾರದ ಬಗ್ಗೆ ಇದ್ದ ನನ್ನ ಧೋರಣೆಗೆ ತುಂಬ ಬೆಂಬಲ ಕೊಟ್ಟು ಮಾತನಾಡಿದ್ದುಂಟು. ಆಹಾರ ವಿಷಯದಲ್ಲಿ ಡಾ. ರಾಜೇಂದ್ರ ಪ್ರಸಾದರು ಅಧಿಕಾರಿತರ ಅಭಿಪ್ರಾಯವನ್ನು ಹೆಚ್ಚಾಗಿ ಅವಲಂಬಿಸಬೇಕೆಂದು ನಾನು ಧಾರಾಳವಾಗಿ ಹೇಳಲು ಹಿಂದೆಗೆಯುವದಿಲ್ಲ.

## ಖಾದಿ ಮತ್ತು ತದ್ವಿರುದ್ಧ ಗಿರಣಿಯ ಬಟ್ಟೆ

ಆಹಾರ ನಿಯಂತ್ರಣಕ್ಕಿಂತ ಬಟ್ಟೆಯ ನಿಯಂತ್ರಣದ ಬಗ್ಗೆ ನಾನು ಇನ್ನೂ ಅಧಿಕಾರ ಯುಕ್ತವಾಗಿ ಮಾತನಾಡಬಲ್ಲೆನಾದರೂ ಆಹಾರ ನಿಯಂತ್ರಣಕ್ಕಿದ್ದ ಬೆಂಬಲವು ನನಗೆ ಬಟ್ಟೆಯ ಬಗ್ಗೆ ಇದೆ. ಯಾವದೇ ಗಿರಣಿಯ ಬಟ್ಟೆ ಅಥವಾ ಪರದೇಶದ ಬಟ್ಟೆಯ ಬದಲು ಖಾದಿಯನ್ನು ಉಪಯೋಗಿಸಬೇಕೆಂಬ ನನ್ನ ಅಭಿಪ್ರಾಯಕ್ಕೆ ಕಾಂಗ್ರೆಸ್ಸು ಅನುಮಾನವಿಲ್ಲದೆ ಬೆಂಬಲ ಕೊಟ್ಟಿತ್ತು. ಅಲ್ಲದೆ ದಿವಂಗತ ಜಮನಾಲಾಲ ಬಜಾಜರ ನೇತೃತ್ವದಲ್ಲಿ ಖಾದಿ ಬೋರ್ಡನ್ನು ಕಾಂಗ್ರೆಸ್ಸು ಸ್ಥಾಪಿಸಿತು. ಈ ಸಂಸ್ಥೆಯೇ ಮುಂದೆ ನಾನು ಯರವಡಾ ಜೇಲಿನಿಂದ ಬಂದ ಮೇಲೆ ಅಖಿಲ ಭಾರತ ಚರಖಾ ಸಂಘವಾಗಿ ಮಾರ್ಪಟ್ಟಿತು. ಹಿಂದುಸ್ತಾನದಲ್ಲಿ ೪೦ ಕೋಟಿ ಜನರಿದ್ದಾರೆ. ಈಗ ಪಾಕಿಸ್ತಾನ ವಿಭಾಗವನ್ನು ಹೊರತು ಪಡಿಸಿದರೂ ೩೦ ಕೋಟಿಗೆ ಹಿಂದುಸ್ತಾನದ ಜನವಸತಿ ಮಿಕ್ಕುತ್ತದೆ. ನಮ್ಮ ದೇಶದಲ್ಲಿ ನಮಗೆ ಬೇಕಾಗುವಷ್ಟು ಹತ್ತಿಯ ಬೆಳೆ ಬಂದೇ ಬರುತ್ತದೆ. ನೇಯಲು ತಕ್ಕುದಾದ ನೂಲನ್ನೂ ನೂಲಬಲ್ಲವರು ಸಾಕಷ್ಟು ಜನರಿದ್ದಾರೆ. ಮತ್ತು ದೇಶಕ್ಕೆ ಬೇಕಾದ್ದಕ್ಕಿಂತ ಹೆಚ್ಚು ಜನರು ಕೈನೂಲನ್ನು ನೇಯಬಲ್ಲವರೂ ದೇಶದಲ್ಲಿ ಇದ್ದಾರೆ. ದೇಶದ ಪೂರೈಕೆಗೆ ಸಾಲುವಷ್ಟು ರಾಟಿಗಳನ್ನೂ ಕೈಮಗ್ಗಗಳನ್ನೂ ಮತ್ತು ಇವಕ್ಕೆ ಬೇಕಾಗುವ ಇನ್ನುಳಿದ ಉಪಕರಣಗಳನ್ನೂ ದೊಡ್ಡ ಪ್ರಮಾಣದ ಮೂಲಧನವಿಲ್ಲದೆ ನಿರಾಯಾಸವಾಗಿ ಸಿದ್ಧಪಡಿಸಲೂ

—೯ನೇ ಪುಟಕ್ಕೆ

# ಗಾಂಧೀಜಿಯ ಪ್ರಾರ್ಥನೋತ್ತರ ಭಾಷಣ

(೮ನೇ ಪುಟದಿಂದ್ಲ)

ಬಹುದಾಗಿದೆ. ಆದರೆ ಇದೆಲ್ಲಕ್ಕೆ ಖಾದಿಯನ್ನು ಇದು ಮತ್ತಾವ ವಸ್ತ್ರವನ್ನೂ ಧರಿಸುವದಿಲ್ಲವೆಂಬ ಅಚಲ ಮನೋ ನಿರ್ಧಾರ ಮಾತ್ರ ಅವಶ್ಯವಾಗಿ ಬೇಕು. ಬೇಕಾದಷ್ಟು ನಯವಾದ ಖಾದಿಯನ್ನು ಸಿದ್ಧಪಡಿಸಬಹುದೆಂಬ ಮಾತೂ ಈಗಾಗಲೇ ಪ್ರತೀತಿಗೆ ಬಂದಿದೆಯಲ್ಲದೆ ಗಿರಣಿಯ ಮೋರೆಯ ಮೇಲೆ ಹೊಡೆಯುವಂತಹ ವಿಧವಿಧದ ಸುಳುವು ಸಿಂಗಾರಗಳನ್ನೂ ಕೈಮಗ್ಗದಲ್ಲಿ ನೇಯಬಹುದೆಂಬುದನ್ನು ವಸ್ತ್ರಶಿಲ್ಪಿಗಳು ತೋರಿಸಿದ್ದಾರೆ. ಇಂದು ಹಿಂದುಸ್ತಾನವು ಸ್ವತಂತ್ರವಾಗಿರುವದರಿಂದ ಖಾದಿಗೆ ಹಿಂದಿನಂತೆ ವಿದೇಶೀಯ ಪ್ರತಿಸ್ಪರ್ಧಿಗಳು ಕೂಡ ಇರುವದಿಲ್ಲ. ಆದ್ದರಿಂದ ನನಗೆ ತೀರ ಸೋಜಿಗದ ಸಂಗತಿಯೆಂದರೆ ಸ್ವತಂತ್ರ ಭಾರತದಲ್ಲಿ ಇಂದು ಖಾದಿಯ ಮಾತಾಗಲೀ ಖಾದಿಯ ಬಗ್ಗೆ ಇದ್ದ ಮೊದಲಿನ ನಿಷ್ಠೆಯಾಗಲೀ ಕಂಡು ಬರುತ್ತಿಲ್ಲ. ಎಲ್ಲರೂ ಭಾರತದ ಮಾನವನ್ನು ಗಿರಣಿಯ ಬಟ್ಟೆಯಿಂದಲೇ ಮುಚ್ಚಬೇಕೆನ್ನುತ್ತಾರೆ. ಖಾದಿಯಲ್ಲಿ ನನಗಿದ್ದ ವಿಶ್ವಾಸ ಇನ್ನಾರಿಗೂ ಉಳಿದಂತೆ ಕಾಣಲೊಲ್ಲದು. ಆದರೂ ಖಾದಿಯ ಆರ್ಥಿಕ ಭದ್ರತೆಯು ಅರ್ಥಶಾಸ್ತ್ರ ದೃಷ್ಟಿಯಿಂದ ಹಿಂದುಸ್ತಾನಕ್ಕೆ ತುಂಬ ಲಾಭದಾಯಕವೆಂದು ಈಗಲೂ ನಾನು ಸಾರುತ್ತೇನೆ.

ಬಿರ್ಲಾಭವನ, ಹೊಸದಿಲ್ಲಿ ೭-೧೧-೪೭

## ತೇಹಾರ ಹಳ್ಳಿಯಲ್ಲಿ

ತೇಹಾರ ಎಂಬ ಹಳ್ಳಿಯಲ್ಲಿನ ಮುಸಲ್ಮಾನ ನಿರಾಶ್ರಿತರನ್ನು ಮಹಾತ್ಮರು ಕಾಣಲು ಹೋಗಿ ಅಲ್ಲಿ ನಿರೀಕ್ಷಿಸಿದ್ದಕ್ಕಿಂತ ಹೆಚ್ಚು ಸಮಯ ವ್ಯಯವಾಯಿತು. ಮರಳಿಬಂದವರೇ ಪ್ರಾರ್ಥನಾ ಸಭೆಗೇ ಹೋದರು. ವಾಡಿಕೆಯಂತೆ ಪ್ರಾರ್ಥನೆ ಪೂರೈಸುತ್ತಲೇ ತಿಳಿಸಿಇಂತು ಮುಂತಾಗಿ ನುಡಿದರು.

“ ತೇಹಾರದ ಎಡಬಲಕ್ಕಿದ್ದು ಮತ್ತು ತೇಹಾರದಲ್ಲಿದ್ದ ಮುಸಲ್ಮಾನರು ಕಾರಣವಿಲ್ಲದೆ ಕಷ್ಟಕ್ಕೀಡಾಗುತ್ತಿರುವದನ್ನು ಕಂಡು ನನಗೆ ದುಃಖವಾಗುತ್ತದೆ. ಅವರಲ್ಲಿ ಅನೇಕರು ಹೊಲನೆಲ ಉಳ್ಳವರಿರುತ್ತಾರೆ. ಅವರು ವೃಥಾಭೀತಿಯಿಂದ ಆ ಹೊಲಗಳನ್ನು ಉಳದೆ ಬಿತ್ತದೆ ಬೀಳು ಬಿಟ್ಟಿದ್ದಾರೆ. ಅವರು ತಮ್ಮ ಎತ್ತುಗಳನ್ನೂ ದನಕರುಗಳನ್ನೂ ಕುಂಟಿಕೂರಿಗೆಗಳನ್ನೂ ಇನ್ನುಳಿದ ಜಂಗಮ ಸೊತ್ತನ್ನೆಲ್ಲ ಮಾರಿಬಿಟ್ಟಿದ್ದಾರೆ. ಇವರಿಗೆ ದಂಡಿನ ರಕ್ಷೆಯಿದೆ. ನನ್ನ ಸುತ್ತು ನೆರೆದ ದುಃಖಿಗಳು ೩ ಸಾವಿರಕ್ಕೆ ಮಿಕ್ಕಿರಬಹುದು. ಅವರೆಲ್ಲ ಪಾಕಿಸ್ತಾನಕ್ಕೆ ಹೋಗಲು ಕಾತರರಾಗಿದ್ದಾರೆ. ಅವರ ಬಂಧು ಬಾಂಧವರೆಲ್ಲ ಈಗಾಗಲೇ ಪಾಕಿಸ್ತಾನಕ್ಕೆ ಹೋದುದರಿಂದ ಜೀವನವು ಕಷ್ಟಕರವೆಂದು ಅವರಿಗೆತೋರಿದೆ. ಆದಷ್ಟು ಬೇಗ ತಮ್ಮನ್ನು ಲಾಹೋರಕ್ಕೆ ಕಳುಹಿಸಿಕೊಟ್ಟರೆ ಅತ್ಯಂತ ದಯೆತೋರಿದಂತಾಗುವದೆಂದು ಅವರು ತಮ್ಮ ಮುಂದಾಳಿನ ಮೂಲಕ ನನಗೆ ಕೇಳಿಕೊಂಡರು. ದಂಡಿನ ಕಾವಲಿನ ಬಗ್ಗೆ ತಮ್ಮ ಯಾವ ದೂರೂ ಇಲ್ಲವೆಂದು ಅವರು ಅರುಹಿದರು. ತೇಹಾರದ ಬಗ್ಗೆ ಹೆಚ್ಚಿನ ವಿವರ ಹೇಳಲು ನಿಮ್ಮ ಸಮಯ ತೆಗೆದುಕೊಳ್ಳಲು ನಾನು ಬಯಸುವದಿಲ್ಲ. ಆದರೆ ಅಲ್ಲಿ ನೆರೆದವರಿಗೆ ತಮ್ಮ ಬಯಕೆಯನ್ನು ಪ್ರಧಾನ ಮತ್ತು ಉಪ ಪ್ರಧಾನಮಂತ್ರಿಗಳಿಗೆ ಅರುಹುಹೆನೆಂದೂ ನೇರವಾಗಿ ಏನಾದರೂ ಮಾಡಲು ನನಗೆ ಬಾರದೆಂದೂ ಅವರಿಗೆ ತಿಳಿಸಿದೆನು. ”

## ಒಂದುಪಾಠ

ಆ ಮೇಲೆ ಗಾಂಧಿಯವರು ದಿಲ್ಲಿಯಲ್ಲಿಯ ನಿರಾಶ್ರಿತರು ಒಂದು ಜಟಿಲಸಮಸ್ಯೆಯಾಗಿ ಕುಳಿತಿದ್ದಾರೆ ಎಂಬ ಮಾತನ್ನೆತ್ತಿ ಇಂತು ಮುಂತಾಗಿ ಹೇಳಿದರು.

“ನಿರಾಶ್ರಿತರು ತಾವು ಕಷ್ಟಕ್ಕೆ ಗುರಿಯಾದವರೆಂಬ ಒಂದು ಬಲದಿಂದ ತಮಗೆ ಎಲ್ಲವೂ ಸಲ್ಲತಕ್ಕದ್ದೆಂಬ ಮನೋಭಾವದಿಂದ ವರ್ತಿಸುತ್ತಿರುವರಾಗಿ ನಾನು ಕೇಳಿದ್ದೇನೆ. ತಮಗೆ ಬೇಕಾದ ಪದಾರ್ಥಗಳಿಗಾಗಿ ಪೇಟೆಗೆಹೋದಾಗ ಅಂಗಡಿಗಳ ಒಡೆಯರು ಅದನ್ನು ಬೆಲೆ ಕೇಳದೆ ಕೊಡಬೇಕೆಂದು ಇಲ್ಲವೆ ಕಡಿಮೆ ಬೆಲೆಗೆ ಕೊಡಬೇಕೆಂದು ನಿರೀಕ್ಷಿಸುತ್ತಾರಂತೆ. ಒಬ್ಬೊಬ್ಬರು ಎಷ್ಟೋ ಸಲ ನೂರಿನ್ನೂರು ರೂಪಾಯಿಗೆ ಮಿಕ್ಕುವಷ್ಟು ಪದಾರ್ಥ ತೆಗೆದುಕೊಂಡು ಹೀಗೆ ನಿರೀಕ್ಷಿಸಿದ್ದುಂಟು. ಅನೇಕ ಸಲ ವಾಹನಗಳನ್ನು ಉಪಯೋಗಿಸಿ ಅದಕ್ಕಾಗಿ ತಾವು ಕೊಡಬೇಕಾದ ಹಣವನ್ನು ಟಾಂಗಾದವರು ಬೇಡಬಾರದೆಂದೂ ಬೇಡಿದರೂ ಸ್ವಲ್ಪ ಮಾತ್ರ ಬೇಡಬಹುದೆಂದೂ ಇವರ ನಿರೀಕ್ಷೆ. ಇದೆಲ್ಲ ನಿಜವಿದ್ದ ಪಕ್ಷಕ್ಕೆ ದುರ್ದೈವವು. ದುರ್ದೈವಿಗೆ ಕಲಿಸಬೇಕಾದ ಪಾಠವನ್ನು ಅವರು ಕಲಿತಿಲ್ಲವೆಂದೇ ಹೇಳಬೇಕಾಗುವದು. ಹೀಗೆ ಮಾಡಿ ತಮಗೂ ದೇಶಕ್ಕೂ ಕೂಡಿಯೇ ಕೇಡುಬಗೆಯುತ್ತಿದ್ದಾರಲ್ಲದೆ ಈಗಾಗಲೇ ಸಾಕಷ್ಟು ಜಟಿಲವಾದ ಈ ನಿರಾಶ್ರಿತರ ಸಮಸ್ಯೆಯನ್ನು ಇನ್ನೂ ತೊಡಕಿನದಾಗಿ ಮಾಡುತ್ತಿದ್ದಾರೆ. ನಿರಾಶ್ರಿತರ ಈ ಬಗೆಯ ವರ್ತನವು ಹೀಗೇ ಸಾಗಿದರೆ ದಿಲ್ಲಿಯ ವರ್ತಕರು ಇವರನ್ನು ಸಮೀಪಕ್ಕೆ ಸಹ ಬರಗೊಡಲ್ಲಿಕ್ಕಿಲ್ಲ.”

## ನಿರಾಶ್ರಿತರಿಗೆ ಉಪದೇಶ

ತಮ್ಮ ಸರ್ವಸ್ವವನ್ನೂ ಕಳೆದುಕೊಂಡ ನಿರಾಶ್ರಿತರು ವಿಪುಲವಾಗಿ ಅದು ಹೇಗೆ ಪದಾರ್ಥಗಳನ್ನು ಕೊಂಡುಕೊಳ್ಳುತ್ತಿರುವರೋ ನನಗೆ ತಿಳಿಯದಾಗಿದೆ. ಅತ್ಯಾವಶ್ಯಕವಾದಾಗ ಮತ್ತು ಯೋಗ್ಯವಿದ್ದಾಗ ಮಾತ್ರ ವಾಹನಗಳನ್ನುಪಯೋಗಿಸಬೇಕಲ್ಲದೆ ಉಳಿದ ವೇಳೆಯಲ್ಲಿ ನಿರಾಶ್ರಿತರು ದೇವರು ಕೊಟ್ಟ ತಮ್ಮ ಕಾಲನ್ನೇ ಹೋಗಲು ಬರಲು ಅವಲಂಬಿಸಬೇಕೆಂದು ನಾನು ಹೇಳ ಬಯಸುತ್ತೇನೆ. ನಿರಾಶ್ರಿತರು ಬಂದಂದಿನಿಂದ ಸರಾಯಿಯಂತಹ ಮಾದಕ ದ್ರವ್ಯಗಳಿಂದ ಬರುವವರಮಾನ ತುಂಬ ಹೆಚ್ಚಿದೆಯೆಂದೂ ಕೇಳಿದ್ದೇನೆ. ಕೇಂದ್ರ ಸರಕಾರವೇ ಆಗಲಿ ಪ್ರಾಂತಿಕ ಸರಕಾರವೇ ಆಗಲಿ ಕಾಂಗ್ರೆಸಿನ ಧ್ಯೇಯಕ್ಕೆ ಅವಿರೋಧವಾಗಿರಬೇಕಾದರೆ ತಮ್ಮ ರಾಜ್ಯದಲ್ಲಿ ಅಫು, ಗಾಂಜಾ ಮೊದಲಾದ ಮಾದಕ ಪದಾರ್ಥಗಳೇ ಸಿಕ್ಕದಂತೆ ನೋಡಿಕೊಳ್ಳಬೇಕು. ಇನ್ನು ಮಾದಕ ದ್ರವ್ಯಗಳಿಂದ ಪರಾವೃತ್ತರಾಗಲು ಮುಸ್ಲಿಂ ಸ್ನೇಹಿತರಿಗೆ ಕಾಂಗ್ರೆಸ ನಿರ್ಣಯದ ಅಗತ್ಯವೇನಿಲ್ಲ. ಕೆಟ್ಟದ್ದನ್ನು ತ್ಯಜಿಸಲು ಯಾರ ನಿರ್ಣಯವೇಕೆ ಬೇಕು? ಅಭೂತಪೂರ್ವ ಕಷ್ಟನಷ್ಟಗಳನ್ನು ಸಹಿಸಿಕೊಂಡ ನಿರಾಶ್ರಿತರು ಮಾದಕ ದ್ರವ್ಯಗಳನ್ನೂ ಇನ್ನಿತರ ವಿಲಾಸಗಳನ್ನೂ ಬಿಟ್ಟುಕೊಡಲಾರರೆ? ಆ ನಿಗ್ರಹದ ಪಾಠವು ಅವರಿಗೆ ಬಾರದೆ ಹೋಗಬಹುದೆ? ನಾನು ಈ ಮೊದಲು ಕೊಟ್ಟ ಪ್ರಾರ್ಥನೋತ್ತರ ಭಾಷಣಗಳಲ್ಲಿಯ ಉಪದೇಶಗಳನ್ನು ಅವರು ಅನುಸರಿಸುವರೆಂದು ತಾವು ಬಂದು ನೆಲಸಿದವರ ಮಧ್ಯದಲ್ಲಿ ಹೊರಲಾರದ ಹೊರೆಯಾಗದೆ ಹಾಲಲ್ಲಿ ಸಕ್ಕರೆ ಸಮರಸವಾಗಿರುವ ಹಾಗೆ ಇರಲು ಅವರು ಹವಣಿಸುವರೆಂದೂ ನಾನು ನಂಬಿದ್ದೇನೆ. ಧನಿಕ ಹಾಗೂ ನಿರ್ಧನಿಕ ನಿರಾಶ್ರಿತರು ಒಂದೇ ಬೀಡಾರದಲ್ಲಿ ಪರಸ್ಪರರು ಅತ್ಯಂತ ಸಹಕಾರದಿಂದ ಸ್ವಾವಲಂಬಿಗಳಾಗಿ ಇದ್ದುಕೊಂಡು ಆದರ್ಶ ನಾಗರಿಕರಾಗುವರೆಂದು ಆಶಿಸುತ್ತೇನೆ.

ಬಿರ್ಲಾಭವನ, ಹೊಸದಿಲ್ಲಿ
ತಾ॥ ೮—೧೧—೪೭

ವಾಡಿಕೆಯಂತೆ ವಿನಮ್ರ ಭಾವದ ಮೂಕ ಆಕ್ಷೇಪಕನಲ್ಲದೆ ಕುರಾನ ಪಠನಕ್ಕೆ ಇಂದು ಮೂವರು ಆಕ್ಷೇಪಕರಿದ್ದರು. ಆದ್ದರಿಂದ, ಗಾಂಧಿಯವರು ಪ್ರೇಕ್ಷಕರನ್ನು ಕುರಿತು, ಆಕ್ಷೇಪಕರ ಬಗ್ಗೆ ರಾಗದ್ವೇಷಗಳನ್ನು ವ್ಯಕ್ತಪಡಿಸತಕ್ಕದ್ದಲ್ಲವೆಂಬ ನಿಯಮವನ್ನು ಪಾಲಿಸಿ ಚಿತ್ತಚಾಂಚಲ್ಯವಿಲ್ಲದೆ ಪ್ರಾರ್ಥನಾಸಭೆಯಲ್ಲಿ ಭಾಗವಹಿಸಬಹುದೇ ಎಂದು ಕೇಳಿದರು. ಆ ನಿಯಮವನ್ನು ಚಾಚೂ ತಪ್ಪದಂತೆ ಪಾಲಿಸುವದಾಗಿ ಪ್ರೇಕ್ಷಕರು ಏಕ ಕಂಠದಿಂದ ಅರುಹಿದರು. ಆಕ್ಷೇಪಕರು ಪ್ರಾರ್ಥನೆಯು ಮುಗಿವವರೆಗೆ ಶಾಂತವಾಗಿದ್ದರು. ಯಾವ ಅಂತಂಕವೂ ಇಲ್ಲದ ಹಾಗೆ ಪ್ರಾರ್ಥನೆಯಾಯಿತು. ಇದಕ್ಕಾಗಿ ಗಾಂಧಿಯವರು ಪ್ರೇಕ್ಷಕರನ್ನು ವಿಶೇಷತಃ ಆಕ್ಷೇಪಕರನ್ನು ಅಭಿನಂದಿಸಿದರು.

## ಶೀಖ ಧರ್ಮಗ್ರಂಥ ಪಠಣ

ಶೀಖ ಮಿತ್ರರೊಬ್ಬರು ತಮಗೆ ಬರೆದ ಒಂದು ಪತ್ರದ ಬಗ್ಗೆ ಗಾಂಧೀಜಿ ಹೇಳಿದರು. ಈ ಶೀಖ ಮಿತ್ರರು ಪ್ರಾರ್ಥನಾಸಭೆಗೆ ದಿನವೂ ತಪ್ಪದೆ ಬರತಕ್ಕವರು ಮತ್ತು ಇದರಲ್ಲಿ ತುಂಬ ವಿಶ್ವಾಸವಿದ್ದವರು. ಈ ಮಿತ್ರ ಪ್ರಾರ್ಥನೆಯಲ್ಲಿ ಅಡಗಿದ ಸಹಿಷ್ಣುತಾ ಭಾವವನ್ನು ಅವರು ತುಂಬ ಮೆಚ್ಚಿಕೊಂಡವರು. ಗ್ರಂಥಸಾಹೇಬ, ಸುಖಮಣಿ, ಜಪಜಿ ಮೊದಲಾದವುಗಳ ಬಗ್ಗೆ ಗಾಂಧೀಜಿ ಮಾತನಾಡಿದ್ದಕ್ಕೆ ಅವರು ಸಂತುಷ್ಟರು. ಆದರೆ ಗಾಂಧಿಯವರು ತಮ್ಮ ದಿನದ ಪ್ರಾರ್ಥನೆಯಲ್ಲಿ ಶೀಖರಿಗೆ ತುಂಬ ಸಂತೋಷವಾಗುವದಾಗಿಯೂ ಅಖಿಲ ಶೀಖ ಕುಲದ ಪರವಾಗಿ ತಾವು ಈ ಮಾತನಾಡುವದಾಗಿಯೂ ಅವರು ಅರುಹಿದ್ದಾರೆ. ಅಲ್ಲದೆ ಇಂತಹ ಪ್ರಾರ್ಥನಾವಚನಗಳನ್ನು ಆಯ್ದು ತಾವು ಅನ್ನುವ ಹೊಣೆಯನ್ನು ಹೊರುವದಾಗಿ ಆ ಸ್ನೇಹಿತರು ತಿಳಿಸಿದ್ದಾರೆ. ಗಾಂಧಿಯವರು ಇದಕ್ಕೆ ಕೂಡಲೆ ಒಪ್ಪಿಕೊಂಡರಾದರೂ ಮೊದಲೊಮ್ಮೆ ತಾವು ಆ ವಚನಪಾಠಗಳನ್ನು ಕೇಳಿ ಆಮೇಲೆ ನಿರ್ಧಾರಕ್ಕೆ ಬರುವದಾಗಿ ಆ ಸ್ನೇಹಿತರಿಗೆ ತಿಳಿಸಿದರು. ಇದಕ್ಕೋಸುಗ ಆ ಶೀಖ ಸ್ನೇಹಿತರಿಗೆ ಒಂದು ನಿರ್ದಿಷ್ಟ ಸಮಯವನ್ನು ಸಂದರ್ಶನಕ್ಕೆ ಶ್ರೀ ಬ್ರಿಜ ಕೃಷ್ಣರ ಮುಖಾಂತರ ಏರ್ಪಡಿಸಿಕೊಳ್ಳಬೇಕೆಂದು ಸೂಚಿಸಿದರು.

## ಹತ್ತಿಯ ಮೂಟೆಗಳಿಗಾಗಿ ಬಿನ್ನಹ

ಅನಂತರ ಗಾಂಧಿಯವರು ಮುಂಬಯಿಯ ಹತ್ತಿ ಗಿರಣಿಯ ಸಾವುಕಾರರಿಂದ ಬಂದ ದಾನದ ಅಶ್ವಾಸನದತ್ತ ಗಮನ ಸೆಳೆದರು. ನಿರಾಶ್ರಿತರು ಸ್ವತಃ ಹೊದಿಕೆಗಳನ್ನು ತಯಾರಿಸಿಕೊಳ್ಳಲನುಕೂಲವಾಗುವಂತೆ ಹತ್ತಿ ಮತ್ತು ಕ್ಯಾಲಿಕೋಗಳನ್ನು ಕೊಡಬೇಕೆಂಬುದಕ್ಕೆ ಒಪ್ಪಿಗೆ ಕೊಟ್ಟಿದ್ದರು. (ಆ ಸಾವಕಾರರು) ಅದರಿಂದ ಲಕ್ಷಾಂತರ ರೂಪಾಯಿ ಉಳಿತಾಯ ವಾಗುವುದು. ಅದರಿಂದ ನಿರಾಶ್ರಿತರ ಆತ್ಮಗೌರವ ಹೆಚ್ಚುವುದು ಮತ್ತು ಅವರು ಅದರಿಂದ ಕರಿಯಬೇಕಾದ ಸಹಕಾರ ಪದ್ಧತಿಯ ಪ್ರಥಮ ಪಾಠವನ್ನು ಕಲಿಯುತ್ತಾರೆ. ದಿಲ್ಲಿಯಲ್ಲಿ ಹತ್ತಿಯ ಗಿರಣಿಗಳಿಗೇನೂ ಕೊರತೆಯಿಲ್ಲ. ನಗರದಲ್ಲಿ ಅನೇಕ ಗಿರಣಿಗಳು ನಡೆಯುತ್ತಿವೆ, ಆದರೆ ಮುಂಬಯಿಯ ದಾನವನ್ನು ಸ್ವೀಕರಿಸಿದ್ದೇಕೆಂದರೆ ಆಗಲೆ ಕೊಟ್ಟವಸೆಗೆ ಇನ್ನಷ್ಟು ತೊಂದರೆ ಕೊಡಬಾರದು ಎಂಬುದರಿಂದ ದಾನಿಗಳು ಹೆಚ್ಚಾದ ಪುಷ್ಟಿ ದೇಶಕ್ಕೆ ಒಳ್ಳೆಯದು. ಆದುದರಿಂದ ಗಿರಣಿ ಸಾವಕಾರರು ಆದಷ್ಟು ಹತ್ತಿಯ ಮೂಟೆಗಳನ್ನೂ ಬೇಗನೆ ಕಳುಹುವರೆಂದು ಭರವಸೆಯಿದೆ. ಸಾವಕಾರರು ಹೀಗೆ ಸಹಕರಿಸುವುದರಿಂದ ಸರಕಾರದ ಹೆಗಲೆಷ್ಟೋ ಹಗುರುವಾಗುತ್ತದೆ. ನಾವು ನಾವೇ ಆದ ಮೇಲೆ ಪ್ರತಿಯೊಬ್ಬನೂ ಸ್ವಯಂ ಸ್ಫೂರ್ತಿಯ ಕಜ್ಜಗಾರನೇ, ಸರಕಾರದೊಡನೆ ಸಹಕರಿಸುವವನೇ; ನಾಗರಿಕ ಶಬ್ದದ ಸಂಪೂರ್ಣ ಅರ್ಥದಂತೆ ಅವನು ಕರ್ತವ್ಯ ನಿರ್ವಹಿಸುವದಾದರೆ ಹಾಗಿರಬೇಕು.

## ಖಾದಿಯ ತಯಾರಿಕೆ

ಹತ್ತಿಯ ಮೂಟೆಗಳು ಬಂದ ಮೇಲೆ ಸಾಕಷ್ಟು ಕ್ಯಾಲಿಕೋ ಕೊಡಲು ಗಿರಣಿ ಮಾಲಕರಿಗೆ ಹೇಳಬಲ್ಲೆ. ಹತ್ತಿಯ ಬಟ್ಟೆಯೆಂದೊಡನೆ ಬಟ್ಟೆಯ ನಿಯಂತ್ರಣ ನೆನಪಾಗುತ್ತದೆ. ದೇಶದಲ್ಲಿ ಸಾಕಷ್ಟು ಹತ್ತಿ ಬೆಳೆಯುತ್ತಿರುವಾಗ ಕೈಯಿಂದಲೆ ಖಾದಿಯನ್ನು ತಯಾರಿಸಿ ಭಾರತದಲ್ಲಿ ಎಲ್ಲರಿಗೂ ಬಟ್ಟೆ ಒದಗಿಸಲು ಸಾಧ್ಯವಿದೆ. ಹತ್ತಿಗೆ ಎಂದೂ ಈ ನಾಡಿನಲ್ಲಿ ಬರಗಾಲ ಬಂದದ್ದನ್ನು ನಾನು ನೋಡಿಲ್ಲ. ಬೇಕಾದದ್ದಕ್ಕಿಂತ ಹೆಚ್ಚನ್ನೇ ಯಾವಾಗಲೂ ಬೆಳೆಯುತ್ತಿರುವುದರಿಂದ ಅಂತಹ ಸಂದರ್ಭವೆಂದೂ ಉಂಟಾಗಲಾರದು. ಸಾವಿರಾರು ಮೂಟೆಗಳಷ್ಟು ಹತ್ತಿಯನ್ನು ಹೊರನಾಡಿಗೆ ಕಳುಹಿದರೂ ನಮ್ಮ ಗಿರಣಿಗೆ ಸಾಕಷ್ಟು ಹತ್ತಿ ಉಳಿದೇ ಉಳಿಯುತ್ತದೆ. ನಾನು ಆಗಲೇ ಹೇಳಿದಂತೆ ಕೈಯಿಂದಲೇ ಹಿಂಜುವುದು. ಈ ಎಲ್ಲಕ್ಕೆ ಬೇಕಾದ ಸಾಧನಗಳೆಲ್ಲ ಇಲ್ಲಿ ಸಿಗುತ್ತವೆ. ಜನಬಲ ಬೇಕಾದಷ್ಟಿದೆ. ಅದುದರಿಂದ ನಾಡಿನಲ್ಲಿ ಬಟ್ಟೆಯಿಲ್ಲವೆಂಬ ಮಾತು ಕೇವಲ ಸೋಮಾರಿಗಳ ಮಾತಾಗಿದೆ. ಯಾರೂ ಬಟ್ಟೆಯ ನಿಯಂತ್ರಣ ಬೇಕೆನ್ನುವುದಿಲ್ಲ. ಗಿರಣಿಗಳಿಗೂ ಬೇಡ, ಕೂಲಿಕಾರರಿಗೂಬೇಡ, ಕೊಳ್ಳುವ ಸಾರ್ವಜನಿಕರಿಗೂ ಬೇಡ, ನಿಯಂತ್ರಣಗಳು ದೇಶವನ್ನು ಹಾಳುಗೆಡುಹುತ್ತಿವೆ, ಉದ್ಯೋಗವಿಲ್ಲದೆ ಸದಾ ಕಿತಾಪತಿಮಾಡುವ ಸೋಮಾರಿಗಳ ಸೈನ್ಯವನ್ನು ಹೆಚ್ಚುಮಾಡುತ್ತಿವೆ.

## ಸ್ವ ಸಹಾಯ ಮತ್ತು ಸಹಕಾರ

ಈ ವಿಷಯದಲ್ಲಿ ನಿರಾಶ್ರಿತರಿಗೆ ಉಪದೇಶ ಮಾಡುತ್ತ ಗಾಂಧೀಜಿ ಹೇಳಿದ್ದು :

ನಿರಾಶ್ರಿತರಿಗೆ ತಾವು ಉಪಯುಕ್ತ ಕಾರ್ಯದಲ್ಲಿ ತೊಡಗಬೇಕೆಂಬ ನಿರ್ಧಾರವಿದ್ದರೆ ಅವರು ಮೊದಲು ತಮಗಾಗಿ ಬೆಚ್ಚನ್ನ ಹಾಸು ಹೊದಿಕೆಗಳನ್ನು ಸಿದ್ಧಗೊಳಿಸಿಕೊಂಡು, ಆ ಮೇಲೆ ಉಳಿದ ಪ್ರತಿಯೊಂದು ಕ್ಷಣವನ್ನೂ — ಗಂಡುಹೆಣ್ಣೆನ್ನದೆ — ಹತ್ತಿ ಸೋಸುವದು, ಹಿಂಜುವದು, ನೂಲುವದು, ನೇಯುವದು, ಮೊದಲಾದ ಕಾರ್ಯಗಳಿಗೆ ವಿನಿಯೋಗಿಸಬೇಕು. ಅನೇಕ ಲಕ್ಷ ನಿರಾಶ್ರಿತರು ಈ ಬಗೆಯಾಗಿ ಹೊರ ಹೊಮ್ಮಿಸಿದ ಚೈತನ್ಯದಿಂದ ಇಡೀ ದೇಶದಲ್ಲೆ ವಿದ್ಯುತ್ಸಂಚಾರವಾಗಿ ಜನರೆಲ್ಲರನ್ನೂ ಈ ನಿರಾಶ್ರಿತರ ಮಾದರಿಯನ್ನನುಸರಿಸುವಂತೆ ಮಾಡೀತು ಹಾಗು ಪ್ರತಿಯೊಂದು ಅವಕಾಶವನ್ನೂ ಆಹಾರದ ಬೆಳೆ ಬೆಳೆಸಲು ಮತ್ತು ತಮ್ಮ ಶಾಲೆಗಳಲ್ಲಿಯೂ ಖಾದಿಯನ್ನು ಹುಟ್ಟಿಸಲು ಉಪಯೋಗಿಸುವಂತೆ ಪ್ರೇರೇಪಿಸೀತು.

ಮೂಟೆಗಳಾಗಿ ಕಟ್ಟುವುದಕ್ಕಿಂತ ಹತ್ತಿಯನ್ನು ಹಳ್ಳದಿಂದ ನೇರವಾಗಿ ತೆಗೆದುಕೊಂಡು ಹತ್ತಿರದ ನೂಲಿಗರಲ್ಲಿ ಒಯ್ದರೆ ಒಂದು ಕೆಲಸ ಉಳಿಯುವುದು, ಹತ್ತಿ ಹಾಳಾಗುವುದು ಇಲ್ಲ, ಹಿಂಜುವುದು ಸುಲಭವಾಗುವುದು ಮತ್ತು ಹತ್ತಿಯಕಾಳು ಹಳ್ಳಿಗರು ಉಪಯೋಗಿಸಲಿಕ್ಕೆ ಉಳಿಯುತ್ತದೆ.

## ಕರುಣೆಯ ಅಕ್ಕ

(ಕಸ್ತೂರಿಬಾ ಸ್ಮಾರಕನಿಧಿಯ ಕಾರ್ಯಕರ್ತೆಯರಾದ ಶ್ರೀಮತಿ ಬೊಮ್ಮ್ಯಾಟನ್ನರು ತಮ್ಮೊಳಗಿಂದ ಸುದ್ದಿಯನ್ನೆತ್ತಿದರು.)

ಅಂಕಲ ಕರುಣೆಯ ಅಕ್ಕನವರಾಗಿ ಎರಡೂ ಅಧಿರಾಜ್ಯಗಳಲ್ಲಿ ಸಂಚರಿಸಿ ನಿರಾಶ್ರಿತರ ಶಿಬಿರಗಳಿಗೆ ಭೆಟ್ಟಿಯಿತ್ತು ರೋಗಗ್ರಸ್ತರನ್ನು ನರಳುವವರನ್ನು ಕಂಡು ಅವರಿಗೆ ಕೈಯಲ್ಲಾದ ಸಹಾಯವನ್ನಿತ್ತರು. ಕುರುಕ್ಷೇತ್ರ ಶಿಬಿರಕ್ಕೆ ಅವರು ಸಂದರ್ಶನವಿತ್ತಾಗ ನಾನು ಅಲ್ಲಿಗೆ ಯಾವಾಗ ಹೋಗುವೆನೆಂದು ಅವರನ್ನು ಶಿಬಿರದವರು ಕೇಳಿದರು. ಅನೇಕರ ಬಾಯಿಂದ ನನ್ನ ಬರವಿನ ಆಸೆಯನ್ನು ಕೇಳಿ ಸದ್ಯದಲ್ಲೇ ನಾನು ಬರುವುದಾಗಿ ಅವರು ಅವರಿಗೆ ಹೇಳಿದಳು. ನೀನು ಮಾಡಿದ್ದು ಸರಿಯೆಂದು ನಾನು ಅವಳಿಗೆ ಹೇಳಿದೆ. ಹಿಂದು ಮುಸಲ್ಮಾನರು ಆತುರರಾಗಿರುವ ಪಾಕೀಸ್ಥಾನದ ಶಿಬಿರಕ್ಕೆ ಹೋಗಲು ನಾನು ಆಗಲೇ ಅಣಿಯಾಗಿದ್ದೆ. ಅದೇ ತಿರುಗಾಟದಲ್ಲಿ ಕುರುಕ್ಷೇತ್ರದ ಶಿಬಿರಕ್ಕೂ ಹೋಗಬೇಕೆಂದು ಮಾಡಿದ್ದೆ. ಆದರೆ ಕುರುಕ್ಷೇತ್ರಕ್ಕೆ ಅದೇಕ ಸಮಯಕ್ಕೆ ಹೋಗಲಾಗುವುದಿಲ್ಲ ಎಂದು ಕಂಡು ಬಂದಿದೆ. ಆದ್ದರಿಂದ ಮುಂಬರುವ ಎ. ಆಯ್. ಸಿ. ಸಿ. ಸಭೆ ಮುಗಿವ ವರೆಗೆ ನಾನು ಕುರುಕ್ಷೇತ್ರಕ್ಕೆ ಬರುವದನ್ನು ಮುನ್ನಾಗಲೇ ಬೇಕಾಗಿದೆ. ಅಲ್ಲದೆ ಕುರುಕ್ಷೇತ್ರದಂತಹ ದೊಡ್ಡ ಬೀಡಾರದಲ್ಲಿ ಧ್ವನಿವಾಹಕ ಯಂತ್ರವನ್ನು ಏರ್ಪಡಿಸುವದು ಕಷ್ಟವೆಂದೂ ತಿಳಿದೆ. ಈ ಬೀಡಾರದಲ್ಲಿದ್ದವರಿಗೆ ನಾನು ದಿಲ್ಲಿಯಿಂದ ರೇಡಿಯೋ ಮೂಲಕ ಮಾತನಾಡುವದೇನು ಅಷ್ಟು ಕಷ್ಟಕರವಲ್ಲ. ಇದಕ್ಕಾಗಿ ಅಲ್ಲಿಯೊಂದು ರೇಡಿಯೋ ಉಪಕರಣವನ್ನು ಇಡಬೇಕಾದೀತು ಅಷ್ಟೇ. ಮಂಗಳವಾರ ಅಥವಾ ಬುಧವಾರದಿನ ನಾನು ಹೀಗೆ ಅವರಿಗಾಗಿ ಮಾತನಾಡಬಹುದು. ಮುಂದೆ ಅವರನ್ನು ಸಂಧಿಸುತ್ತೇನೆ. ಅದೇ ಕಾಲಕ್ಕೆ ಪಾಣೀಪತ್ತಕ್ಕೂ ಹೋಗಿ ಬರಬಹುದೆಂದು ಆಶಿಸುತ್ತೇನೆ.

ಬಿರ್ಲಾಭವನ, ಹೊಸದಿಲ್ಲಿ
ತಾ॥ ೯-೧೧-೪೭

ನಾನು ನಾಳೆ ಪಾಣಿಪತ್ತಕ್ಕೆ ಹೋಗಬೇಕಾಗಿದೆ. ಇಂದೇ ಆದಷ್ಟು ಬೇಗ ನಾನು ಮೌನವನ್ನು ಕೈಕೊಂಡು ಪಾಣಿಪತ್ತನ್ನು ತಲುಪುತ್ತಲೇ ಅಲ್ಲಿಯ ಹಿಂದು ಮುಸಲ್ಮಾನರನ್ನು ಕುರಿತು ಮಾತನಾಡಲು ಸಿದ್ಧನಾಗಬೇಕು. ಪ್ರಾರ್ಥನೆಯ ಹೊತ್ತಿಗೆ ಸರಿಯಾಗಿ ದಿಲ್ಲಿಗೆ ನಾನು ಮರಳಬಹುದೆಂದುಕೊಂಡಿದ್ದೇನೆ. ಆಗ ಮತ್ತೆ ನಿಮ್ಮೊಡನೆ ಮಾತನಾಡುವಾ. ನಾಳೆ ನಾನು ಕುರುಕ್ಷೇತ್ರಕ್ಕೆ ಹೋಗುವೆನೆಂಬುದಾಗಿ ಪತ್ರಿಕೆಗಳು ತಪ್ಪು ಪ್ರಕಟನೆ ಕೊಟ್ಟಿವೆ. ಮುಂಬರುವ ಎ. ಆಯ್, ಸಿ. ಸಿ. ಸಭೆಯ ಮುನ್ನ ನಾನು ಅಲ್ಲಿಗೆ ಹೋಗುವದಿಲ್ಲವೆಂದು ಖಚಿತವಾಗಿಯೇ ನಾನು ಹೇಳಿರುವೆ. ಅಲ್ಲಿಯ ಜನಕ್ಕೆ ರೇಡಿಯೋ ಮುಖಾಂತರ ಬಹುತರ ಬುಧವಾರದಿನ ಮಾತನಾಡಬಹುದು. ನಿಶ್ಚಿತ ಸಮಯವನ್ನು ಆಮೇಲೆ ತಿಳಿಸಲಾಗುವದು.

## ದೀಪಾವಳಿಯ ಉತ್ಸವ ಬೇಡ

ದೀಪಾವಳಿಯು ಇಷ್ಟರಲ್ಲಿ ಬರಲಿದೆ, ಓರ್ವ ನಿರಾಶ್ರಿತ ಭಗಿನಿಯು ಇಂತು ಮುಂತಾಗಿ ಬರೆದಿದ್ದಾಳೆ.

“ ದೀಪಾವಳಿಯ ಹಬ್ಬವನ್ನು ಆಚರಿಸುವದೋ ಬೇಡವೋ ಎಂದು ನಮ್ಮಲ್ಲಿ ಅನೇಕರಿಗೆ ದಿಗಿಲಾಗಿದೆ. ಈ ಬಗ್ಗೆ ನಮ್ಮ ವಿಚಾರಗಳನ್ನು ನಿಮ್ಮಿದಿರು ಇಡಬಯಸುತ್ತೇನೆ. ನನ್ನ ಹಿಂದೀ ಭಾಷೆ ತಡವರಿಸಿ ತೊದಲಿನದೂ ಹೌದಲ್ಲ. ನಾನು ಗುಜರಾನವಾಲಾದಿಂದ ಬಂದ ನಿರಾಶ್ರಿತಳು. ಅಲ್ಲಿ ನಾನು ನನ್ನ ಸರ್ವಸ್ವವನ್ನೂ ಕಳೆದು ಕೊಂಡಿದ್ದೇನೆ. ಆದರೂ ಸ್ವಾತಂತ್ರ್ಯ ಸಿಕ್ಕಿತೆಂಬ ಉಬ್ಬು ನಮ್ಮ ಹೃದಯವನ್ನು ಆನಂದದಿಂದ ಉಕ್ಕಿಸಿದೆ. ಸ್ವತಂತ್ರ ಹಿಂದುಸ್ತಾನದ ಮೊದಲ ದೀಪಾವಳಿಯ ಹಬ್ಬವಿದು, ಆದ್ದರಿಂದ ನಮ್ಮ ನಮ್ಮ ದುಃಖವನ್ನೆಲ್ಲ ಮರೆತು ಭಾರತವೆಲ್ಲ ಅಸಂಖ್ಯಾತ ದೀಪಜ್ಯೋತಿಯಿಂದ ಬೆಳಗುವಂತೆ ಮಾಡುವದು ಉಚಿತ. ನಮಗಾಗಿ ನಮ್ಮ ಬವಣೆಗಾಗಿ ನಿಮ್ಮ ಹೃದಯ ಕಲ್ಲಾಗಿ ಹೋಗಿದೆ. ಕರುಣ ದೇಶವು ಈ ಸಮಯದಲ್ಲಿ ಹಿಗ್ಗಿ ನಲಿವುದು ನಿಮಗೆ ಬೇಡವಾಗಿರುವದು ಸಹಜವೇ. ಈ ನಿಮ್ಮ ಸಹಾನುಭೂತಿಪರ ಹೃದಯಸ್ಪಂದನಕ್ಕೆ ನಾವು ತುಂಬ ಋಣಿಯಾಗಿದ್ದೇವೆ. ನಿಮ್ಮ ಹೃದಯ ಬೇಡನೆ

—೧೦ ನೇ ಪುಟಕ್ಕೆ

## ಗಾಂಧೀಜಿಯ ಪ್ರಾರ್ಥನೋತ್ತರ ಭಾಷಣ

(೯ನೇ ಪುಟದಿಂದ)

ಕೆ ಎಂದಿದ್ದರೂ ನೀವು ಸಕಲ ನಿರಾಶ್ರಿತರಿಗೆ ಅದರಂತೆ ಅಖಿಲ ಭಾರತದ ಜನರಿಗೆ ಈ ಹಬ್ಬವನ್ನು ಉಬ್ಬಿನಿಂದ ಆಚರಿಸಲು ಹೇಳಬೇಕಾಗಿ ಬೇಡುತ್ತೇನೆ, ಮತ್ತು ಧನಿಕರಾದವರು ಕಾಸಿಲ್ಲದವರಿಗೆ ಧನಸಹಾಯ ಮಾಡುವವರಾಗಿಯೂ ಕೇಳಬೇಕಾಗಿ ಬಿನ್ನವಿಸುತ್ತೇನೆ. ಸ್ವಾತಂತ್ರ್ಯ ಸಂಪ್ರಾಪ್ತಿಯ ನಂತರ ಬರುವ ಎಲ್ಲ ಹಬ್ಬ ಹರಿದಿನಗಳನ್ನೂ ಆಚರಿಸುವ ಮೇಧಾ ಬಲವನ್ನು ದೇವರು ದಯಪಾಲಿಸಲೆಂದು ಬೇಡಿಕೊಳ್ಳುತ್ತೇನೆ."

- ಈ ನನ್ನ ಭಗಿನಿಯನ್ನೂ ಇವಳಂತಹ ಇನ್ನುಳಿದವರನ್ನೂ ನಾನು ಕೂಡ ಪ್ರಶಂಸಿಸುತ್ತೇನೆ. ಆದರೆ ಇವಳೂ ಹೀಗೆ ವಿಚಾರಿಸುತ್ತಿರುವವರೂ ತಪ್ಪು ಎಂದು ಹೇಳದಿರಲಾರೆ. ದುಃಖಕ್ಕೆ ಗುರಿಯಾದ ಕುಟುಂಬವು ಉತ್ಸವಾದಿಗಳನ್ನು ಸಾಧ್ಯವಿದ್ದಷ್ಟೂ ಆಚರಿಸುವದಿಲ್ಲವೆಂಬುದು ಸರ್ವಶ್ರುತ. ಇದು ಅದ್ವೈತದ ಒಂದು ಸಣ್ಣ ಪ್ರಮಾಣದ ಉದಾಹರಣವೆನ್ನಬಹುದು. ಇದು ಸೀಮಿತವಿದೆ. ಈ ಕೌಟುಂಬಿಕ ಸೀಮೆಯನ್ನು ತೆಗೆದು ಬಿಟ್ಟರೆ ಭಾರತವೊಂದು ದೊಡ್ಡ ಕುಟುಂಬವಾಗಿ ಬಿಡುತ್ತದೆ. ಇದನ್ನು ಇನ್ನೂ ಹಿಗ್ಗಿಸಿ ಹೇಳಿದರೆ, ಅಂದರೆ ಈ ಸೀಮಾ ನಿರ್ಬಂಧ ಕಳಚಿದರೆ ಇಡೀ ಜಗವೇ ಒಂದು ಕುಟುಂಬವಾಗದೆ? ನಿಜಕ್ಕೂ ಜಗವೆಂಬುದು ಒಂದು ಕುಟುಂಬವೇ. ಈ ಸೀಮಾ ನಿರ್ಬಂಧವನ್ನು ನಾಶಿಸಿರುವದೆಂದರೆ ಮಾನವ ಸಹಜ ಸೂಕ್ಷ್ಮ ಭಾವಗಳಿಗೆ ಬೆಲೆ ಕೊಡದಿರುವದೆಂದೇ ಅರ್ಥ. ಮನುಷ್ಯನು ಮನುಷ್ಯನಾಗಿರುವದು ಈ ನಯವಾದ ಭಾವ ವಿಶೇಷದಿಂದಲೇ. ನಾವು ಸ್ವಾರ್ಥಿಗಳಾಗಿ ಅಥವಾ ವೃಥಾಭಾವಾವಿಷ್ಟರಾಗಿ ವಸ್ತುಸ್ಥಿತಿಯನ್ನು ತಪ್ಪಾಗಿ ಗ್ರಹಿಸಬಾರದು. ಉತ್ಸವಾದಿಗಳನ್ನು ಆಚರಿಸಬಾರದೆಂದು ಹೇಳುವಾಗ ನಾನು ಅನೇಕ ಮುಖವಾಗಿ ಆಲೋಚಿಸಿದ್ದೇನೆ. ಹೀಗೆ ಹೇಳಲು ಬಲವಾದ ಕಾರಣಗಳಿವೆ. ಈ ನಿರಾಶ್ರಿತರ ಸಮಸ್ಯೆಯು ಲಕ್ಷಾನುಲಕ್ಷ ಹಿಂದುಗಳ ಶೀಖರ ಅದರಂತೆ ಮುಸಲ್ಮಾನರ ತಲೆ ತಿನ್ನುತ್ತದೆ. ಸಾಲದ್ದಕ್ಕೆ ಅನ್ನ ವಸ್ತ್ರದ ಅಭಾವ ಬೇರೆ. ಇದಕ್ಕೂ ಆಳವಾದ ಕಾರಣ ಒಂದಿದೆ. ಅದು ಸಾರ್ವತ್ರಿಕ ಜನಾಭಿಪ್ರಾಯವನ್ನು ಬದಲಿಸುವ ಸಾಮರ್ಥ್ಯವುಳ್ಳವರ ಅಪ್ರಾಮಾಣಿಕತೆಯೆಂದು ಹೇಳಬಹುದು. ಇದರ ಜೊತೆಗೆ ತಮ್ಮ ಸಂಕಷ್ಟದಿಂದ ಏನನ್ನೂ ಕಲಿಯಲೊಲ್ಲದ ನಿರಾಶ್ರಿತರ ನಿರ್ಲಜ್ಜತೆ ಮತ್ತು ಮನುಷ್ಯನು ಮನುಷ್ಯನನ್ನು ಅತ್ಯಂತ ಅಮಾನುಷ ನಿರ್ದಯತೆಯಿಂದ ಕಾಣುವ ಕ್ರೌರ್ಯ ಬೇರೆ ಸೇರಿದೆ. ಈ ಮಹಾಮಾನವ ದುಃಖದಲ್ಲಿ ಆನಂದಕ್ಕೆ ನನಗೆ ಅವಕಾಶವೇ ಕಾಣದು. ಆದ್ದರಿಂದ ಉತ್ಸವದಲ್ಲಿ ಭಾಗ ಬೇಡವೆಂದು ನಿರ್ಧಾರವಾಗಿ ಹೇಳುವದರಿಂದ ಆತ್ಮಪರೀಕ್ಷೆಗೂ ಆತ್ಮಶುದ್ಧಿಗೂ ಅವಕಾಶ ದೊರೆಯುವದು. ನಾವು ಕಷ್ಟದ ಸೇವೆಯಿಂದ ದೊರಕಿಸಿದ ಯಾವ ಪುಣ್ಯವೂ ವ್ಯರ್ಥವಾಗದಿರಲಿ.

### ಪರರಾಷ್ಟ್ರ ವಸಾಹತುಗಳಲ್ಲಿ ಸ್ವಾತಂತ್ರ್ಯ

ಈ ವಾರದಲ್ಲಿ ಫ್ರೆಂಚ್ ಇಂಡಿಯದಿಂದ ಕೆಲ ಸ್ನೇಹಿತರು ನನ್ನನ್ನು ಕಾಣಬಂದಿದ್ದರು. ಚಂದ್ರನಗರದಲ್ಲಿಯ ಚಳವಳವನ್ನು ನಾನು ಟೀಕಿಸಿದ್ದನ್ನು ದುರುಪಯೋಗಪಡಿಸಿಕೊಂಡು ಸ್ವಾತಂತ್ರ್ಯ ಪಡೆವುದನ್ನು ತಡೆಬಡಿಯಲಾಯಿತೆಂದು ಅವರು ಹೇಳಿದರು. ಅಲ್ಲಿ ಫ್ರೆಂಚರ ಪ್ರಭಾವವೇ ಉಳಿದಿದೆ. ಆಂಗ್ಲ ಸರಕಾರದಲ್ಲಿಯಂತೆ ಅಲ್ಲಾದರೂ ಪಂಚಮ ದಲ ಹವರಿದ್ದಾರಂತೆ. ಅವರು ಸ್ವಾರ್ಥಕ್ಕಾಗಿ ಫ್ರೆಂಚರಿಗೆ ನೆರವಾಗಿ ನಿವಾಸಿಗಳ ಸ್ವಾಭಾವಿಕ ಆಶೆ ಆಕಾಂಕ್ಷೆಗಳನ್ನು ಹತ್ತಿಕ್ಕಲು ನೆರವಾಗುತಿದ್ದಾರೆಂದೂ ಅವರೆಂದರು. ಇದು ನಿಜವಾಗಿದ್ದರೆ ನನಗೆ ಬಹಳ ವ್ಯಥೆಯಾಗುವುದೇಸರಿ.

ಹೇಗೋ ಆಗಲಿ ನನ್ನ ಅಭಿಪ್ರಾಯ ಖಚಿತವಾದದ್ದು ತಮ್ಮ ನಾಡಿಗರಲ್ಲಿ ಕೋಟಿಗಟ್ಟಲೆ ಜನರು ಸ್ವಾತಂತ್ರ್ಯವನ್ನು ಅನುಭವಿಸುತ್ತಿರುವಾಗ ತಾವು ಇನ್ನೂ ಗುಲಾಮಗಿರಿಯಲ್ಲಿರುವುದು ಪರರಾಷ್ಟ್ರ ವಸತಿಗಳಲ್ಲಿರುವವರಿಗೆ ಎಷ್ಟು ಹುಟ್ಟಿಗೂ ಸಾಧ್ಯವಿಲ್ಲ. ಭಾರತದ ಚಿಕ್ಕ ವಸಾಹತೊಂದರಲ್ಲಿ ನಾನು ಚಿಕ್ಕವನಾಗಿ ತೋರುವೆನೆಂದು ಹಾಗೆ ಹೇಳಿದ್ದಾಗಿ ಅರ್ಥ ಮಾಡಿರುವುದು ಅಕ್ಷಮ್ಯ ಕರವಾಗಿದೆ. ಆದುದರಿಂದ ನನಗೆ ಮುಟ್ಟಿಸಿದ ಸುದ್ದಿಗೆ ಬುಡವಿಲ್ಲದಾಗಿರಲೆಂದು ಬಯಸುತ್ತೇನೆ

## ಅಧಿಕ ಪ್ರಸಂಗ

ಮೇಜರ ಜನರಲ್ ಕರಿಯಪ್ಪನವರು ಈ ಕೆಳಗಿನಂತೆ ಹೇಳಿದರೆಂದು ವರದಿ:

"ಹಿಂದುಸ್ತಾನದ ಇಂದಿನ ಸ್ಥಿತಿಗತಿಯಲ್ಲಿ ಅಹಿಂಸೆ ಕೆಲಸಕ್ಕೆ ಬಾರದು. ಪ್ರಬಲ ಸೈನ್ಯವೊಂದೇ ಹಿಂದುಸ್ತಾನವನ್ನು ಜಗತ್ತಿನ ಮಹಾರಾಷ್ಟ್ರಗಳಸಾಲಿಗೆ ಎತ್ತಬಲ್ಲದು" ಎಂದು ಜನರಲ್ ಕರಿಯಪ್ಪನವರು, ಇನ್ನೂ ಅನೇಕ ತಜ್ಞರಂತೆ, ತಮ್ಮ ಅಳವಿಗೆ ಮೀರಿದ ನೀರಿನಲ್ಲಿಳಿದು ಅಹಿಂಸೆಯ ವಿಷಯಕ್ಕಿರುವ ತಮ್ಮ ತಪ್ಪು ತಿಳವಳಿಕೆಯನ್ನು ಪ್ರದರ್ಶಿಸಿದ್ದಾರೆಂದು ನನಗೆ ತೋರುತ್ತದೆ. ಅಹಿಂಸೆಯ ಮಾರ್ಗವನ್ನು ಕುರಿತು ಅವರಿಗೆ ಅಲ್ಪಜ್ಞಾನಕ್ಕಿಂತ ಹೆಚ್ಚೇನೂ ಇರಲಾರದು. ಆಜೀವ ಅಹಿಂಸಾಚಾರದಲ್ಲಿರುವ ನಾನು ಅದರ ವಿಷಯ ಪೂರ್ಣಜ್ಞನಲ್ಲದಿದ್ದರೂ ತಜ್ಞನೆಂದು ಹೇಳಿಕೊಳ್ಳಬಲ್ಲೆ. ನಿಚ್ಚಳ ಹೇಳುವದಾದರೆ ಹಿಂಸೆಯನ್ನು ಆಚರಿಸುತ್ತ ಹೋದಂತೆ ನನ್ನ ಜೀವನದಲ್ಲಿ ಅಹಿಂಸೆಯು ಏರಿ ಪೂರ್ಣ ಅಭಿವ್ಯಕ್ತಿಯನ್ನು ಸಾಧಿಸುವದು ಎಷ್ಟು ದೂರದ ಮಾತೆಂದು ನನಗೆ ಹೆಚ್ಚು ಹೆಚ್ಚು ತಿಳಿದು ಬರುತ್ತದೆ. ಈ ಮಾತು ಅರಿವಿಲ್ಲದ್ದರಿಂದಲೇ, ಅರ್ಥಾತ್ ಜಗತ್ತಿನಲ್ಲಿ ಮಾನವನ ಪರಮಕರ್ತವ್ಯದ ಜ್ಞಾನವಿಲ್ಲದ್ದರಿಂದಲೇ ಜನರಲ್ ಕರಿಯಪ್ಪನವರು ಇಂದಿನ ಯುಗದಲ್ಲಿ ಹಿಂಸೆಯ ಎದುರಿಗೆ ಅಹಿಂಸೆಯ ಆಟ ಸಾಗುವದಿಲ್ಲೆಂದು ಹೇಳುತ್ತಾರೆ. ನಾನು ಮಾತ್ರ ನಿಷ್ಕಲಂಕ ಅಹಿಂಸೆಯೊಂದೇ ಇಂದಿನ ಅಣುಬಾಂಬಿನ ಯುಗದಲ್ಲಿ ಹಿಂಸೆಯ ಎಲ್ಲ ಕೀಟಲೆಗಳನ್ನೂ ಕಂಗೆಡಿಸಬಲ್ಲದೆಂದು ಸಾಧಿಸುವೆ. ಜನರಲ್ ಕರಿಯಪ್ಪನವರು, ಅದೂ ಅವರಿಗೆ ಯುದ್ಧವಿದ್ಯೆಯನ್ನೂ ಪದ್ಧತಿಯನ್ನೂ ಕಲಿಸಿದ ಬ್ರಿಟಿಶರ ಸಹಾಯ ತಪ್ಪಿರುವಾಗ, ತಮ್ಮಳವು ಮೀರಿ ಮಾತಾಡದಿದ್ದರೆ ಚೆನ್ನಾಗುತ್ತಿತ್ತು. ಜನರಲ್ ಕರಿಯಪ್ಪನವರನ್ನು ಮೀರಿಸಿದ ಸೇನಾಪತಿಗಳು ಕೂಡ ಅಹಿಂಸೆಯ ಸಾಧ್ಯಸಾಧ್ಯತೆಯನ್ನು ಕುರಿತು ಮಾತಾಡುವ ಹಕ್ಕು ತಮ್ಮದಲ್ಲವೆಂದು ಒಪ್ಪಿಕೊಂಡು ಜಾಣರಾಗಿದ್ದಾರೆ. ಯುದ್ಧ ವಿದ್ಯೆಗೆ ತನ್ನ ತೌರು ಮನೆಯಲ್ಲಿ ದಿವಾಳಿಗಿರಿ ಒದಗಿದುದನ್ನು ನಾವಿ[...]ದಾರು ಸಲ ನೋಡುತಿದ್ದೇವೆ. ಶೇರ ಪೇಟೆಯಲ್ಲಿ ಆದ ದಿವಾಳಿಯೆದ್ದವನೇ ಆ ಬಗೆಯ ಜುಗಾರಿಯನ್ನು ಹಾಡಿಕೊಂಡಾಡಬೇಕೆ?

ಹೊಸದಿಲ್ಲಿ ೬—೧೧—೪೭ ಮೋ. ಕ. ಗಾಂಧಿ

## "ಮುಸ್ಲಿಮರಿಗೆ ಮಾತ್ರ"

ರೇಲ್ವೆ ನಿಲ್ದಾಣಗಳಲ್ಲಿ ಹಿಂದುಗಳಿಗೆ ಬೇರೆ ಮುಸ್ಲಿಮರಿಗೆ ಬೇರೆ ನೀರಿನ ವ್ಯವಸ್ಥೆಯಿರುವದ್ದನ್ನೇ ನಾನು ಖಂಡಿಸಿರುವಾಗ, ಈಗಂತೂ ರೇಲ್ವೆ ಡಬ್ಬಿಗಳೇ "ಮುಸ್ಲಿಮರಿಗೆ ಮಾತ್ರ" ಮತ್ತು "ಮುಸ್ಲಿಮೇತರರಿಗೆ" ಅಥವಾ "ಹಿಂದುಗಳಿಗೆ" ಎಂದು ಗೊತ್ತುಪಡಿಸಲ್ಪಡುತ್ತಿವೆಯೆಂದು ಯಾರೋ ಒಬ್ಬನು ನನಗೆ ಬರೆದಿದ್ದಾನೆ. ಈ ದುಷ್ಟ ರೂಢಿ ಎಷ್ಟು ಪಟ್ಟಿಗೆ ಹಬ್ಬಿದೆಯೋ ನಾನರಿಯೆ. ಆದರೆ ಹೀಗೆ ಭೇದ ಮಾಡಬೇಕಾಗಿ ಬಂದದ್ದು ಹಿಂದುಗಳಿಗೂ ಶೀಖರಿಗೂ ನಾಚಿಕೆಗೇಡೆಂದಿಷ್ಟು ಹೇಳಬಲ್ಲೆ. ಮುಸ್ಲಿಮರನ್ನು ಕಾಪಾಡುವದಕ್ಕಾಗಿಯೇ ರೇಲ್ವೆ ಅಧಿಕಾರಿಗಳು ಹೀಗೆ ಭೇದವನ್ನು ಕಲ್ಪಿಸಬೇಕಾಯಿತೋ ಏನೊ ಮುಸ್ಲಿಂ ಪ್ರವಾಸಿಕರನ್ನು ಏನೋ ಸರಕುಗಳೆಂಬಂತೆ ನಡೆಸಿಕೊಳ್ಳುವದಿಲ್ಲೆಂದು ಹಿಂದುಗಳೂ ಸೀಖರೂ ನಿರ್ಧಾರ ಮಾಡಿ ಇಂಥ ಅಪರಾಧಗಳು ಇನ್ನು ನಡೆಯುವದಿಲ್ಲೆಂದು ರೇಲ್ವೆ ಅಧಿಕಾರಿಗಳಿಗೆ ಮಾತುಕೊಟ್ಟರೆ ಈ ಅಪರೂಢಿಯನ್ನು ಕೊನೆಗೊಳಿಸಬಹುದು (ಎಷ್ಟು ಬೇಗ ಕೊನೆಗೊಳಿಸಿದರೆ ಅಷ್ಟು ಒಳಿತು.) ಬಹಿರಂಗವಾಗಿ ತಪ್ಪು ಒಪ್ಪಿಕೊಂಡು ವಿವೇಕಶೀಲರಾದರೆ ಇದು ಸಾಧ್ಯ. ಪಾಕಿಸ್ತಾನದಲ್ಲಿ ಏನೇ ಆಗಿರಲಿ, ಇನ್ನೂ ಆಗುತ್ತಿರಲಿ, ಅವನ್ನು ಲೆಕ್ಕಿಸದೆ ನಾನು ಹೀಗೆ ಹೇಳುತಿದ್ದೇನೆ.

ಹೊಸದಿಲ್ಲಿ ೬—೧೧—೪೭ ಮೋ. ಕ. ಗಾಂಧಿ

ತಾ. ೧೦ ರಲ್ಲಿ ಮಹಾತ್ಮಾ ಗಾಂಧಿಯವರು ಮೌಲಾನಾ ಅಬುಲ್‌ಕಲಂ ಆಝಾದರೊಂದಿಗೆ ಕುರುಕ್ಷೇತ್ರ ನಿರಾಶ್ರಿತರ ಶಿಬಿರವನ್ನು ಸಂದರ್ಶಿಸಿದರು.

ಮತ್ತು ಫ್ರೆಂಚರ ಮಹಾ ಜನಾಂಗವು ಜನರನ್ನು ಹತ್ತಿಕ್ಕುವುದರಲ್ಲಿ ಮಗ್ನವಾಗಲಾರದು— ಅವರು ಕರಿಯರಿರಲಿ ಬಿಳಿಯರಿರಲಿ, ಭಾರತದಲ್ಲಿರಲಿ, ಬೇರೆಡೆಯಲ್ಲಿರಲಿ— ಎಂದು ಆಶಿಸುತ್ತೇನೆ.

## ಅಂತರವನ್ನು ಹೋಗಲಾಡಿಸಬೇಕು

ಮೂಲಭೂತ ಶಿಕ್ಷಣದ ವಿಷಯಕ್ಕೆ ಕಳೆದ ಸೆಪ್ಟೆಂಬರ ಆರಂಭದಲ್ಲಿ ಚೀನದಲ್ಲಿ ಪ್ರಾದೇಶಿಕ ಅಭ್ಯಾಸ ಪರಿಷತ್ತೊಂದು ಸೇರಿತ್ತು. ಆ ಬಗ್ಗೆ ಹಿಂದುಸ್ತಾನ ಸರಕಾರದವರು ಹೊರಡಿಸಿದ ಪ್ರಚಾರ ಪತ್ರಿಕೆಯಲ್ಲಿ ಗಾಂಧೀಜಿಯ ಈ ಕೆಳಗಿನ ಸಂದೇಶ ಮತ್ತು ಟಿಪ್ಪಣಿಗಳು ಇವೆ.

"ಯುಕ್ತರಾಷ್ಟ್ರ ಆರ್ಥಿಕ ಸಾಮಾಜಿಕ ಮತ್ತು ಸಾಂಸ್ಕೃತಿಕ ಸಭೆಯವರು ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳ ಮುಖಾಂತರ ಶಾಂತಿಯನ್ನು ಸ್ಥಾಪಿಸಲು ನಡೆಸಿದ ಪ್ರಯತ್ನಗಳ ಬಗ್ಗೆ ನನಗೆ ಬಹಳ ಆಸ್ಥೆಯುಂಟು. ಈಗಿರುವಂತೆ ಜಗತ್ತಿನ ರಾಷ್ಟ್ರ ರಾಷ್ಟ್ರಗಳಲ್ಲಿ ಶಿಕ್ಷಣ ಸಂಸ್ಕೃತಿಗಳ ಅಂತ್ಯಕಿಕ ಅಂತರವಿರುವ ತನಕ ನಿಜವಾದ ಸುರಕ್ಷಿತತೆಯೂ ಚಿರಶಾಂತಿಯೂ ಅಸಾಧ್ಯವೆಂಬ ಮಾತನ್ನು ನಾನು ಸರಿಯಾಗಿ ಮನಗಂಡಿದ್ದೇನೆ. ಅಷ್ಟು ಭಾಗ್ಯಶಾಲಿಗಳಲ್ಲದ ದೇಶಗಳಲ್ಲಿಯೂ ಸಂದಿಗೊಂದಿಗಳಲ್ಲಿರುವ ಮಳಿಗಳಿಗೆ ಕೂಡ ಜ್ಞಾನಪ್ರಕಾಶವನ್ನೊಯ್ಯಬೇಕಾಗಿದೆ. ಈ ಮಹಾಕಾರ್ಯದಲ್ಲಿ ಆರ್ಥಿಕ ಮತ್ತು ಶೈಕ್ಷಣಿಕ ಪ್ರಗತಿಯನ್ನು ಹೊಂದಿದ ರಾಷ್ಟ್ರಗಳಿಗೆ ವಿಶೇಷ ಹೊಣೆಗಾರಿಕೆಯುಂಟೆರಿದು ನನ್ನೆಣಿಕೆ. ನಿಮ್ಮ ಪರಿಷತ್ತಿಗೆ ಯಶ ದೊರಕಲೆಂದು ಹಾರೈಸುವೆ. ಅದರಲ್ಲಿಯೂ ಮುಖ್ಯವಾಗಿ ಆರ್ಥಿಕ ಮತ್ತು ಬೇರೆ ಪರಿಸ್ಥಿತಿಗಳಿಂದ ಶಿಕ್ಷಣಕ್ಕೆ ವಿಲೇಷ ಅವಕಾಶಗಳನ್ನು ಒದಗಿಸಲಾರದ ದೇಶಗಳಿಗೆ ಯೋಗ್ಯ ಶಿಕ್ಷಣ ಪದ್ಧತಿಯನ್ನು ರೂಪಿಸಲು ನೀವು ಸಮರ್ಥರಾಗುವಿರೆಂದು ಆಶಿಸುತ್ತೇನೆ.

ಮೇಲಿನ ಸಂದೇಶದ ಬಗ್ಗೆ ಆ ಪ್ರಚಾರ ಪತ್ರಿಕೆಯಲ್ಲಿ ಈ ಕೆಳಗಿನ ಟಿಪ್ಪಣಿಯುಂಟು.

"ಈ ಸಂದೇಶವನ್ನು ಬಹಳ ಗೌರವಾದರಗಳಿಂದ ಬರಮಾಡಿಕೊಳ್ಳಲಾಯಿತು. ಅದನ್ನೋದಿದಾಗ ಸಭೆಯಲ್ಲಿ ನೆರೆದವರೆಲ್ಲರೂ ಎದ್ದು ನಿಂತು ಕೇಳಿದರು. ಪರಿಷತ್ತು ಸ್ಫೂರ್ತಿದಾಯಕ ಸಂದೇಶ ಕಳಿಸಿದ ಬಗ್ಗೆ ಗಾಂಧೀಜಿಯ ಉಪಕಾರ ಮನ್ನಿಸುವ ಪತ್ರವನ್ನೂ ಅವರಿಗೆ ಕಳಿಸಿತು."

ಹೊಸದಿಲ್ಲಿ ೭-೧೧-೪೭

## ಹಿಂದುಸ್ತಾನಕ್ಕೆ ಸುತ್ತಲಿಂದ ಗಂಡಾಂತರ

### ಪಂ. ಜವಾಹರರ ಭಾಷಣ

"ಕಳೆದ ಎರಡು ತಿಂಗಳಲ್ಲಿ ನಡೆದ ಘಟನೆಗಳಿಂದ ಹಿಂದುಸ್ತಾನಕ್ಕೆ ಎಲ್ಲಕಡೆ ಗಳಿಂದಲೂ ಗಂಡಾಂತರವಿದೆ ಎಂಬ ಮಾತು ಸ್ಪಷ್ಟವಾಗಿದೆ" ಎಂದು ಹಿಂದುಸ್ತಾನದ ಮುಖ್ಯ ಮಂತ್ರಿಗಳಾದ ಪಂಡಿತ ಜವಾಹರಲಾಲನೆಹರೂರು ದಿಲ್ಲಿಯಸಾರ್ವಜನಿಕ ಸಭೆಯಲ್ಲಿ ಭಾಷಣಮಾಡುತ್ತ ಹೇಳಿದರು.

"ಹಿಂದುಸ್ತಾನದ ಜನರು ಕೂಡಲೆ ಪರಿಸ್ಥಿತಿಯನ್ನು ಎದುರಿಸಲು ಯೋಗ್ಯ ರೀತಿಯಿಂದ ಸಿದ್ಧತೆ ಮಾಡಿಕೊಳ್ಳದಿದ್ದರೆ ನಮಗೆ ದೊರೆತ ಸ್ವಾತಂತ್ರ್ಯವು ಅಲ್ಪಕಾಲದ್ದಾಗಬಹುದು.

ಕೆಲ ದಿನಗಳ ಹಿಂದೆ ಜುನಾಗಡ ಸಮಸ್ಯೆಯನ್ನು ನಾವು ಬಿಡಿಸಬೇಕಾಗಿತ್ತು. ಈಗ ಜುನಾಗಡ, ಬಾಬರಿವಾಡ, ಮುಂಗ್ರೋಲುಗಳಿಗಿಂತ ಭೀಕರವಾದ ಕಾಶ್ಮೀರ ಸಮಸ್ಯೆಯನ್ನು ಬಿಡಿಸಲು ತೊಡಗಿದೆವು. ಕಾಶ್ಮೀರ ದಾಳಿಯ ಬಗ್ಗೆ ಪಾಕಿಸ್ತಾನ ಸರಕಾರವು ನಡೆಸಿದ ಸಿದ್ಧತೆಗಳತ್ತ ಲಕ್ಷ್ಯ ಹೋಗಕೂಡದೆಂದು ಜುನಾಗಡದತ್ತ ನಮ್ಮ ಲಕ್ಷ್ಯವನ್ನೆಳೆಯಲಾಗಿತ್ತೆಂಬುದು ಈಗ ನಿಚ್ಚಳವಾಗಿದೆ ಕಾಶ್ಮೀರದ ಮೇಲೆ ದಾಳಿ ನಡೆಸಿದವರು ಕೇವಲ ಗುಡ್ಡಗಾಡು ಜನರಿದೆ ಪಾಕಿಸ್ತಾನದ ಅಧಿಕಾರಿಗಳ ನಿಯಂತ್ರಣದಲ್ಲಿ ಆಧುನಿಕ ಶಸ್ತ್ರಾಸ್ತ್ರಗಳಿಂದ ಸುಸಜ್ಜಿತರಾದ ಪಾಕಿಸ್ತಾನ ಜನರೂ ಅದರಲ್ಲಿದ್ದಾರೆ. ಸಕಾಲದಲ್ಲಿ ಸೈನ್ಯ ಕಳಿಸಿದ್ದರಿಂದ ಕಾಶ್ಮೀರ ಪರಿಸ್ಥಿತಿ ಹದಗೆಡಲಿಲ್ಲ, ಈಗ ಹಿಂದುಸ್ತಾನವು ಸೈನ್ಯಬಲ ಬೆಳಸಬೇಕಾಗಿದೆ. ಉತ್ಪತ್ತಿಯನ್ನು ಹೆಚ್ಚಿಸಬೇಕಾಗಿದೆ. ಅಂತರಿಕ ಶಾಂತತೆ ಕಾಯ್ದುಕೊಳ್ಳಬೇಕಾಗಿದೆ" ಎಂದೂ ಅವರು ಹೇಳಿದರು.

ಪಾಕಿಸ್ತಾನ ಸರಕಾರವು ೧೫೦೦ ಶಬ್ದಗಳ ಒಂದು ಪ್ರಕಟನೆ ಹೊರಡಿಸಿ ಹಿಂದುಸ್ತಾನ ಸರಕಾರವು ಜುನಾಗಡ ಆಡಳಿತ ವಹಿಸಿಕೊಂಡದ್ದು ಪಾಕಿಸ್ತಾನ ಪ್ರದೇಶದ ಮೇಲೆ ಸಶಸ್ತ್ರ ಆಕ್ರಮಣವೆಂದು ಹೇಳಿ ಹಿಂದುಸ್ತಾನವು ಅಂತರ್ರಾಷ್ಟ್ರೀಯ ಕಾನೂನು ಭಂಗ ಮಾಡಿದೆ ಎಂದು ಸಾರಿದೆ.

## ಕಾಶ್ಮೀರ— ಹಿಂದುಸ್ತಾನಗಳು ಎಂದಿಗೂ ಒಂದೇ

### ಪಂಡಿತ ಜವಾಹರರಿಗೆ ಸಂಭ್ರಮದ ಸ್ವಾಗತ

"ಹಿಂದಿನಂತೆ ಇನ್ನು ಮುಂದೆಯೂ ಹಿಂದುಸ್ತಾನಕಾಶ್ಮೀರಗಳು ಕೂಡಿಯೇ ಇದ್ದು ಎರಿಬರುವ ವೈರಿಯನ್ನು ಕೂಡಿಯೇ ಎದುರಿಸುವವು ಎಂಬುದಾಗಿ ನಾನು ಇಂದು ನಿಮ್ಮೆಲ್ಲರ ಸಮ್ಮುಖದಲ್ಲಿ "ಕಾಶ್ಮೀರದ ಹುಲಿ" ಗೆ ವಚನ ಕೊಡುವೆ" ಎಂದು ಹಿಂದುಸ್ತಾನದ ಮುಖ್ಯ ಮಂತ್ರಿಗಳಾದ ಪಂಡಿತ ಜವಾಹರಲಾಲ ನೆಹರೂರವರು ತಾ ೧೧ ರಲ್ಲಿ ಕಾಶ್ಮೀರದಲ್ಲಿ ಸಾರ್ವಜನಿಕ ಸಭೆಯಲ್ಲಿ ಭಾಷಣ ಮಾಡುತ್ತ ಹೇಳಿದರು.

ಪಂಡಿತ ನೆಹರೂರವರು ಹೀಗೆ ನುಡಿದವರೇ ತಮ್ಮ ಬಳಿಯಲ್ಲಿ ಕುಳಿತ ಶೇಖ ಅಬ್ದುಲ್ಲಾರ ಕಡೆಗೆ ಹೊರಳಿ ತಮ್ಮ ಹಸ್ತವನ್ನು ಚಾಚಿದರು. ಶೇಖ ಅಬ್ದುಲ್ಲಾರರು ಪ್ರೇಮದಿಂದ ಪಂಡಿತರು ಚಾಚಿದ ಹಸ್ತವನ್ನು ಹಿಡಿದು ಅಂದೋಲನ ಮಾಡಿದರು. ಜನರು ಇದನ್ನು ನೋಡಿ "ಶೇರ ಕಾಶ್ಮೀರ ಝಿಂದಾಬಾದ" "ಜವಾಹರಲಾಲ ನೆಹರೂ ಝಿಂದಾಬಾದ" ಎಂದು ಜಯಘೋಷ ಮಾಡಿದರು.

ಪಂಡಿತರು ಪುನಃ ಭಾಷಣ ಪ್ರಾರಂಭಿಸಿ "ನಿಮಗೆ ಬೇಕಾಗುವ ಅವಶ್ಯಕ ವಸ್ತುಗಳಾದ ಬಟ್ಟೆ, ಆಹಾರ, ಇವುಗಳನ್ನು ಕಳಿಸುವದಾಗಿ ಹಿಂದುಸ್ತಾನ ಸರಕಾರದ ಪರವಾಗಿ ವಚನ ಕೊಡುವೆ" ವೆಂದು ಹೇಳಿ ನವಂಬರ ೨೬ ನೇ ದಿನ ಕಾಶ್ಮೀರ ರಕ್ಷಣೆಯ ಹೊಣೆ ಹೊರಲು ನಿರ್ಧರಿಸುವಾಗಿನ ಮನಸ್ಥಿತಿಯನ್ನು ವಿವರಿಸಿ ಮಾರನೆ ದಿನ ಸೈನ್ಯವನ್ನು ಕಳಿಸಿದ್ದನ್ನು ಅದಕ್ಕಾಗಿ ಮಾಡಿದ ಅನೇಕ ವ್ಯವಸ್ಥೆಯನ್ನು ವಿವರಿಸಿದರು. ಅನಂತರ ತೊಂದರೆಗಳಿದ್ದರೂ ಹಸನ್ಮುಖದಿಂದ ಅವುಗಳನ್ನೆದುರಿಸಿ ಅಲ್ಪಕಾಲದಲ್ಲಿ ವೈರಿಯನ್ನು ಹಣ್ಣುಗೆಡಿಸಿದ ಹಿಂದೀ ಸೈನಿಕರಿಗೆ ಧನ್ಯವಾದಗಳನ್ನರ್ಪಿಸಿ ಪಂಡಿತ ನೆಹರೂರವರು "ಧೀರರಾದ ಕಾಶ್ಮೀರ ಜನತೆಗೆ ನನ್ನ ಧನ್ಯವಾದಗಳು ವೈರಿಯು ಆಗ ನೆಬಾಗಿಲಿಗೆ ಬಂದಿದ್ದರೂ ಎದೆಗುಂದದೆ ಧೈರ್ಯದಿಂದ ಹಿಂದೂ- ಮುಸಲ್ಮಾನ-ಶೀಖರೆಂದು ಭೇದ ಭಾವವನ್ನೆಣಸದೆ ಒಕ್ಕಟ್ಟಿನಿಂದ ಮಾತೃಭೂಮಿಯಮೇಲೆ ದಾಳಿಮಾಡಿದ ಪುಂಡರ ತಂಡವನ್ನೆದುರಿಸಲು ಸಿದ್ಧರಾದುದರಿಂದ ಕಾಶ್ಮೀರದ ಮರ್ಯಾದೆ ಉಳಿಯಿತು. ಇಷ್ಟೇ ಅಲ್ಲ, ಇದರಿಂದ ಹಿಂದುಸ್ತಾನಕ್ಕೂ ಕೀರ್ತಿ ಬಂದಿತು ನಿಮ್ಮ ಕರ್ತವ್ಯ ಇನ್ನೂ ಮುಗಿದಿಲ್ಲ. ಕಾಶ್ಮೀರದಿಂದ ಎಲ್ಲ ದಾಳಿಗಾರರನ್ನು ಓಡಿಸಬೇಕಾಗಿದೆ. ದುಷ್ಟ ಉದ್ದೇಶದಿಂದ ಕಾಶ್ಮೀರ ಭೂಮಿಯ ಮೇಲೆ ಕಾಲಿಡುವವರೆಲ್ಲ ಅವರು ಬೇಕಾದ ವೇಷದಿಂದ ಬೇಕಾದ ನವಿಮಾತಿನಿಂದ ಬಂದರೂ- ಅವರೆಲ್ಲರೂ ದಾಳಿಗಾರರೇ. ಅವರನ್ನೆಲ್ಲ ಓಡಿಸಲು ನಾಗರಿಕರು ಯಾವಾಗಲೂ ದಕ್ಷವಾಗಿರಬೇಕಾಗಿದೆ.

ಶೇಖ ಅಬ್ದುಲ್ಲಾರು ಜವಾಹರಲಾಲರ ಆಭಾರ ಮನ್ನಿಸುತ್ತ ೪೦ ಲಕ್ಷ ಕಾಶ್ಮೀರ ನಾಗರಿಕರ ಪರಿಯಿಂದ ನೆಹರೂರ ಆಭಾರ ಮನ್ನಿಸಿ ಕಾಶ್ಮೀರ ಹಿಂದುಸ್ತಾನಗಳು ಮಿತ್ರಭಾವದಿಂದ ಇದ್ದು ಪರಸ್ಪರ ಸಹಾಯ ಕೊನೆಯ ವರೆಗೂ ಸಲ್ಲಿಸುತ್ತ ಹೋಗುವಂತಾಗಲೆಂದು ಹಾರೈಸಿದರು.

## ಇತ್ತೆಹಾದುಲ್ಲದ ತಿರುಬೊಬ್ಬೆ

ಇತ್ತೆಹಾದುಲ್ ಮುಸಲ್ಮಾನ ಪಕ್ಷದ ಸಯ್ಯದರವರು ಒಂದು ಹೇಳಿಕೆ ಹೊರಡಿಸಿ ಸಂಸ್ಥಾನದಲ್ಲಿ ಮುಸಲ್ಮಾನರು ದಬ್ಬಾಳಿಕೆಯಿಂದ ಹಿಂದುಗಳನ್ನು ಹೆದರಿಸುತ್ತಿದ್ದಾರೆಂಬಂತೆ ಜನತೆಗೆ ಅಭಿಪ್ರಾಯಪಡಬೇಕೆಂಬ ರಾಜಕೀಯ ದುರುದ್ದೇಶದಿಂದ ಹಿಂದುಗಳನ್ನು ಪೂರ್ವ ಯೋಜನೆಯಿಂದಲೇ ಸಂಸ್ಥಾನದಿಂದ ಸ್ಥಳಾಂತರಿಸಲಾಗಿದೆ. ಸಂಸ್ಥಾನದ ಪ್ರಜೆಗಳ ಅಲ್ಪಸಂಖ್ಯಾಕರಾಗಿದ್ದ ಮುಸಲ್ಮಾನರು ಬಹುಸಂಖ್ಯಾಕರಾದ ಹಿಂದುಗಳನ್ನು ಹೆದರಿಸುವದು ಅದ್ಹೇಗೆ ಸಾಧ್ಯ. ಆದರೆ ಇದಕ್ಕೆ ಪ್ರತಿಯಾಗಿ ಹಿಂದುಗಳೇ ಸುಸಂಘಟಿತರಾಗಿ ಶಸ್ತ್ರ ಸನ್ನದ್ಧರಾಗಿ ಮುಸಲ್ಮಾನರನ್ನು ತುಳಿಯಲೆತ್ನಿಸುತ್ತಿರುವ ಉದಾಹರಣೆಗಳು ಸಾಕಷ್ಟಿವೆ ಎಂದು ಹೇಳಿದ್ದಾರೆ.

ಜುನಾಗಡದಿವಾಣರಾದ ಸರ ನವಾಜ ಭೂತೋರವರು ಒಂದು ಸಂದರ್ಶನದಲ್ಲಿ ಜುನಾಗಡ ಸರಕಾರವು ಹಿಂದುಸ್ತಾನದ ಸರಕಾರಕ್ಕೆ ಆಡಳಿತ ಒಪ್ಪಿಸಿದರು. ಜುನಾಗಡವು ಪಾಕಿಸ್ತಾನದಲ್ಲಿಯೇ ಇದೆ ಎಂದೂ ಜುನಾಗಡ ಸರಕಾರವು ಇದರಿಂದ ತಾತ್ಪೂರ್ತಿಕ ಇಲ್ಲವೆ ನಿರಂತರ ಒಪ್ಪಂದ ಮಾಡಿಕೊಂಡಂತೆ ಅಲ್ಲವೆಂದೂ ಹೇಳಿದ್ದಾರೆ.

# ದುಂಡಿಯ ಸಣಬಿನ ವ್ಯವಸಾಯಕ್ಕೆ ಗಂಡಾಂತರ

ಇಂಗ್ಲಂಡದಲ್ಲಿ ಮ್ಯಾಂಚೆಸ್ಟರವು ನೂಲು ಬಟ್ಟೆಗಾಗಿ ಹೆಸರಾಗಿದ್ದರೆ ಸ್ಕಾಟ್ಲಂಡ ದಲ್ಲಿದ್ದ ದುಂಡಿ ಬಂದರವು ನಾರು ಬಟ್ಟೆಗಾಗಿ ಜಗತ್ಪ್ರಸಿದ್ಧವಾಗಿದೆ. ಇವೆರಡೂ ಸ್ಥಳಗಳು ಕಳೆದ ಶತಮಾನದ ಔದ್ಯೋಗಿಕ ಕ್ರಾಂತಿಯಲ್ಲಿ ಜನ್ಮತಾಳಿದವು. ಆದರೆ ಮ್ಯಾಂಚೆಸ್ಟರದಂತೆ ದುಂಡಿಯಾದರೂ ನಾರಿಗೆ ತನರು ಮನೆಯಾದ ಹಿಂದುಸ್ಥಾನದಿಂದಲೇ ಇಷ್ಟು ಕೀರ್ತಿಯನ್ನೂ ಐಶ್ವರ್ಯವನ್ನೂ ಗಳಿಸಿದೆ. ದುಂಡಿಯು ನಾರು ಗಿರಣಿಯ ಮೇಲೆ ಲಕ್ಷಾವಧಿ ಇಂಗ್ಲೀಷರು ಅವಲಂಬಿಸಿದ್ದ ಕಾರಣ ಇದಕ್ಕೆ ರಾಷ್ಟ್ರೀಯ ಮಹತ್ವ ಬಂದಿದೆ. ಇನ್ನು ಕೆಳಗೆ ವಿವರಿಸಿದಂತೆ ದುಂಡಿಗೆ ಹಿಂದುಸ್ಥಾನ ಪಾಕಿಸ್ತಾನಗಳಿಂದ ಸಾಕಷ್ಟು ನಾರು ದೊರಕದಿದ್ದರೆ ಇಂಗ್ಲಂಡದ ಈಸಗುಂಬಳಕಾಯಿಗೆ ಇನ್ನೊಂದು ರಂಧ್ರ ಬಿದ್ದಂತಾಗುವದು. ಇಂಗ್ಲಂಡದ ಕೀರ್ತಿವೆತ್ತ ಕಾರಖಾನೆಗಳು ಕಚ್ಚಾ ಮಾಲಿಗಾಗಿ ಸದಾ ಪರಾವಲಂಬಿಗಳಾಗಿ ಅತಂತ್ರ ಮತ್ತು ಅಜ್ಞ ವಸಾಹತುಗಳ ಲಾಭವನ್ನು ಯಾವ ಪರಿಯಿಂದ ಮಾಡಿಕೊಳ್ಳುತ್ತಿದ್ದವೆಂಬುದನ್ನೂ ಮತ್ತು ಇಂದಿನ ಬದಲಾದ ಪರಿಸ್ಥಿತಿಯು ಅವನ್ನು ಹೇಗೆ ವಿವಂಚನೆಗೆ ಗುರಿಪಡಿಸಿದೆಯೆಂಬುದನ್ನೂ ಕೆಳಗಿನ ಲೇಖನ ಮನದಟ್ಟುಮಾಡಿಕೊಡಬಹುದು.

ಹಿಂದುಸ್ಥಾನದ ಒಳ್ಳೆಯ ಸ್ಥಿತಿಯಲ್ಲಿದ್ದ ಉದ್ಯೋಗಗಳಲ್ಲಿ ನಾರಿನ ಉದ್ಯೋಗವು ದೇಶ ವಿಭಾಗದಿಂದ ತುಂಬ ಹಾನಿಗೆ ಈಡಾಗಿದೆಯೆಂದು ಹೇಳಬಹುದು. ಈ ಉದ್ಯೋಗದ ನೆಲೆದಪ್ಪಿ ತತ್ತರಿಸಿ ಕುಸಿಯುವ ಪರಿಸ್ಥಿತಿ ಬಂದುಹೋಗಿದ್ದು ಅದನ್ನು ಹಾಗೂ ಹೀಗೂ ಇತ್ತೀಚೆಗೆ ನೆಲೆಗೊಳಿಸಲು ಪ್ರಯತ್ನಗಳಾಗಿವೆ. ಆದರೂ ದೇಶ ವಿಭಾಗದ ಮುನ್ನ ಇದ್ದ ಭದ್ರತೆ ಅದಕ್ಕೆ ಇನ್ನೂ ಬಾರದಾಗಿದೆ.

ದೇಶವಿಭಾಗವಾಗಿ ಎರಡು ತಿಂಗಳು ಮಿಕ್ಕಿ ಹೋದರೂ ಈ ವರೆಗೆ ಪಾಕಿಸ್ತಾನ ಸರಕಾರದವರಿಂದ ಕಚ್ಚಾನಾರನ್ನು ಹಿಂದುಸ್ತಾನದ ಕಾರಖಾನೆಗಳಿಗೆ ಒದಗಿಸುವ ಬಗ್ಗೆ ಯಾವದೇ ಬಗೆಯ ನಿಶ್ಚಿತ ಧೋರಣ ಇನ್ನೂ ಕೈಕೊಳ್ಳಲ್ಪಟ್ಟಿಲ್ಲ. ನಾರಿನ ವ್ಯಾಪಾರಸ್ಥರನೇಕರು ಈ ಬಗ್ಗೆ ಹೆಚ್ಚಿನ ಸ್ಥಿತ್ಯಂತರಗಳಾಗಲಿಕ್ಕಿಲ್ಲವೆಂದು ನಂಬಿಕೊಳ್ಳುತ್ತಿದ್ದಾರೆ. ಇನ್ನು ಕೆಲವರು ಕಚ್ಚಾನಾರಿನ ಪೂರೈಕೆಯ ವಿಷಯದಲ್ಲಿ ನಿರಾಶಾಜನಕ ಸ್ಥಿತಿಯು ತಪ್ಪಿದ್ದಲ್ಲವೆಂದೂ ಈ ವ್ಯವಸಾಯದ ಭವಿತವ್ಯ ಅಂಧಕಾರಮಯವಾಗಿರುವದೆಂದೂ ನಿಟ್ಟುಸಿರು ಬಿಡುತ್ತಿದ್ದಾರೆ. ಯಾಕಂದರೆ ಪಾಕಿಸ್ತಾನದಲ್ಲಿ ಪ್ರಚುರವಾಗಿ ಬೆಳೆವ ಪ್ರಮುಖ ಪದಾರ್ಥಗಳಲ್ಲಿ ನಾರು ಒಂದಾಗಿದ್ದ ತಿಂದ ಹಿಂದುಸ್ತಾನದಿಂದ ತಮಗೆ ಬೇಕೆನಿಸಿದ ಅವಶ್ಯಕ ಪದಾರ್ಥಗಳನ್ನು ಲಾಭದಲ್ಲಿ ಪಡೆಯಲು ಇದನ್ನು ವಿನಿಮಯವಾಗಿ ಬಳಸುವ ಉದ್ದೇಶದಿಂದ ಪಾಕಿಸ್ತಾನ ಸರಕಾರದವರು ಇದರ ನಿರ್ಯಾತವನ್ನು ತಡೆಹಿಡಿದಿರುವ ಸಂಭವವಿದೆ. ಈ ಬಗೆಯ ವಿಚಾರವೇ ಇತ್ತೀಚೆ ನಾರಿನ ಉದ್ದಿಮೆದಾರರಲ್ಲಿ ನೆಲೆಯೂರಹತ್ತಿದೆ. ಈ ಪರಿಸ್ಥಿತಿಯನ್ನು ಮನದಂದೇ ಶ್ರೀ ಜಿ. ಕೆ. ಸರಕಾರರು ಹಿಂದುಸ್ತಾನ ಸರಕಾರಕ್ಕೆ ಈ ವಿಷಯದಲ್ಲಿ ಎಚ್ಚರಿಕೆ ಹೇಳಿದ್ದಲ್ಲದೆ ನಾರಿನ ಬದಲು ಇನ್ನೇನಾದರೂ ಪದಾರ್ಥವು ಉಪಯೋಗಕ್ಕೆ ಬರುವಂತೆ ಹಿಂದುಸ್ತಾನದ ಸೀಮೆಯಲ್ಲಿ ಅದರ ಹುಟ್ಟುವಳಿಯ ಎತ್ತುಗಡೆ ಮಾಡಬೇಕಾದುದು ಅವಶ್ಯಕವೆಂದು ನುಡಿದರು. ಇಲ್ಲದಿದ್ದರೆ ಗಂಡಾಂತರ ತಪ್ಪಿದ್ದಲ್ಲ.

ಹೀಗೆ ಹಿಂದುಸ್ತಾನದ ನಾರಿನ ವ್ಯವಸಾಯವು ಅನಿಶ್ಚಿತವಾಗಿದ್ದಾಗ ಇದರ ಪ್ರತಿರೂಪದಂತಿದ್ದ ಮತ್ತು ದುಂಡಿಯಲ್ಲಿ ಕೇಂದ್ರೀಕೃತವಾದ ಬ್ರಿಟನ್ನಿನ ಈ ವ್ಯವಸಾಯವಾದರೂ ಊರ್ಜಿತದಲ್ಲಿ ಉಳಿದಿಲ್ಲ. ಈ ಕೆಲ ತಿಂಗಳಲ್ಲಿ ಹಿಂದುಸ್ತಾನದ ನಾರಿನ ಕಾರಖಾನೆಯ ಉತ್ಪತ್ತಿಯಲ್ಲಿ ಇಳಿಮುಖವಿದ್ದಂತೆ ದುಂಡಿಯ ನಾರಿನ ವ್ಯವಹಾರದಲ್ಲಿಯೂ ಇಳಿಮುಖವಾಗಿದೆ. ಅಲ್ಲಿಯೂ ಉತ್ಪತ್ತಿಯು ಕುಗ್ಗಿದೆ; ನಿರ್ಯಾತ ತಗ್ಗಿದೆ. ಹೊರಗಿಂದಬಂದ ಕಚ್ಚಾ ನಾರಿನ ಮೇಲೆಯೇ ದುಂಡಿಯ ಕಾರ್ಖಾನೆಗಳು ಮುಖ್ಯವಾಗಿ ಬದುಕಿವೆ. ಹೊರಗಿಂದ ಬರುವದು ಈಗ ಕೊರಗಿದೆ. ಅದರಂತೆ ಪಾಕ್ಕಾ ಮಾಲು ಸಿದ್ಧವಾಗುವ ಪ್ರಮಾಣವೂ ಅಲ್ಲಿ ಕಡಿಮೆಯಾಗಿದೆ. ಈ ವರ್ಷದ ಮೊದಲಿನ ಆರು ತಿಂಗಳಲ್ಲಿ ಬ್ರಿಟನ್ನಿಗೆ ಹಿಂದುಸ್ತಾನದಿಂದ ನಾರು ಬಟ್ಟೆ ಒಟ್ಟಿಗೆ ೯,೫೮, ೯೩, ೦೦೦ಗಜ ಹೋಗಿದೆ. ಅದೇ ಹೋದ ವರ್ಷದ ಮೊದಲಿನ ಆರು ತಿಂಗಳಲ್ಲಿ ೧೩, ೮೩, ೧೧, ೦೦೦ ಗಜ ನಾರು ಬಟ್ಟೆ ಬ್ರಿಟನ್ನಿಗೆ ನಿರ್ಯಾತವಾಗಿತ್ತು. ಈ ಎರಡೂ ಅಂಕಿಗಳನ್ನು ಹೋಲಿಸಿದರೆ ಈ ವ್ಯವಹಾರ ಹೇಗೆ ಕುಗ್ಗುತ್ತ ಸಾಗಿದೆ ಎಂಬುದರ ಕಲ್ಪನೆ ಬರದಿರದು. ನಾರು ಚೀಲಗಳ ನಿರ್ಯಾತ ಈ ವರ್ಷ ೭, ೩೧, ೬೨೦, ಕ್ವಾರ್ಟರ್‌ದ್ದರೆ ಹೋದ ವರ್ಷ ೩, ೫೯, ೫೪೯, ಕ್ವಾರ್ಟರ್‌ತ್ತು. ಹೀಗೆ ಹಿಂದುಸ್ತಾನದಿಂದ ಕಚ್ಚಾ ನಾರು ಮತ್ತು ಸಿದ್ಧ ನಾರು ಇವುಗಳ ನಿರ್ಯಾತ ಇಳಿಮುಖವಲ್ಲಿದ್ದರೂ ದುಂಡಿಯ ಕಾರಖಾನೆಯವರು, ವ್ಯಾಪಾರಗಾರರು ದಿನದಿನವೂ ಹೆಚ್ಚುತ್ತಿರುವ ಬೇಡಿಕೆ ಪೂರೈಸಲು ತುಂಬ ಪ್ರಯಾಸ ಪಡುತ್ತಿದ್ದಾರೆ. ಆದರೆ ಹಿಂದಿನ ಅಂಕಿಸಂಖ್ಯೆಗಳು ಇದೆಲ್ಲ ವ್ಯರ್ಥ ಪ್ರಯಾಸವೆಂದು ತೋರುವದಿಲ್ಲವೆ? ಹೀಗೆ ದುಂಡಿಯ ನಾರಿನ ವ್ಯವಸಾಯದ ತೂಕ ತಪ್ಪಿ ನಿಂತಿರಲು ಇತ್ತೀಚಿನ ದೇಶವಿಚ್ಛೇದರಿಂದ ಅದು ಇನ್ನೂ ಚಿಂತಾಜನಕವಾಗಿ ಈ ವ್ಯವಸಾಯದ ಭವಿತವ್ಯವೇನು ಎಂಬ ಶಂಕೆಯನ್ನುಂಟು ಮಾಡಿದೆ.

ಪಾಕಿಸ್ತಾನದ ನಾರಿನ ನಿರ್ಯಾತದ ಧೋರಣೆ ಅದೇನಿದೆಯೋ ತಿಳಿಯದಾದರೂ ಅದು ಬ್ರಿಟನ್ನಿಗೆ ಕಚ್ಚಾ ನಾರು ಕಳಿಸುವದನ್ನು ನಿಲ್ಲಿಸಲಿಕ್ಕಿಲ್ಲ ಎಂದು ಊಹಿಸಬಹುದು. ಆದರೂ ದುಂಡಿಯ ವ್ಯವಹಾರಸ್ಥರು ಅತ್ಯಂತ ವ್ಯಾಕುಲಭಾವದಿಂದ ಈ ಬಗ್ಗೆ ಹಿಂದುಸ್ತಾನದಲ್ಲಿ ಆಗಬಹುದಾದ ಆಗುಹೋಗುಗಳನ್ನು ನಿರೀಕ್ಷಿಸುತ್ತಿದ್ದಾರೆ. ಪಾಕಿಸ್ತಾನ ಹಿಂದುಸ್ತಾನಗಳೆರಡೂ ತಮಗೆ ಬೇಕಾದ ಅವಶ್ಯಕ ಪದಾರ್ಥಗಳನ್ನು ದೊರಕಿಸಲು ಬ್ರಿಟನ್ ಇಲ್ಲವೆ ಬೇರೆ ದೇಶದವರೊಡನೆಯೂ ಈ ಬಗ್ಗೆ ವ್ಯವಹಾರ ನಡೆಸಬಹುದೆಂದು ಅನೇಕರು ಹೆದರಿದ್ದಾರೆ. ಪಾಕಿಸ್ತಾನದ ಅಧಿಕಾರಿಗಳ ಹೇಳಿಕೆಗಳು ಕೆಲವು ಈ ಭಯಕ್ಕೆ ಪುಷ್ಟಿಯನ್ನೂ ಕೊಡುವಂತಿವೆ. ತನ್ನ ಆಂತರಿಕ ಜಟಿಲ ಸಮಸ್ಯೆಗಳಲ್ಲಿಯೇ ಮಗ್ನವಾದ ಇಂಗ್ಲಂಡವು ಪಾಕಿಸ್ತಾನಕ್ಕಾಗಲೀ ಹಿಂದುಸ್ತಾನಕ್ಕಾಗಲೀ ತನಗೂ ಬೇಕಾದ ಅವಶ್ಯಕ ಪದಾರ್ಥಗಳನ್ನು ಒದಗಿಸದೆ ಹೋಗಬಹುದು. ಆಗ ಪಾಕಿಸ್ತಾನ ಮತ್ತು ಹಿಂದುಸ್ತಾನ ಇವೆರಡೂ ರಾಜ್ಯಗಳು ಅವಕ್ಕಾಗಿ ಬ್ರಿಟನ್ನನ್ನು ತೊರೆದು ಬೇರೆಯವರ ಬಳಿಸಾರಲೂ ಬಹುದು. ಈ ಮಾತನ್ನು ಕಡೆಗಣಿಸಲು ಬರುವಂತಿಲ್ಲ.

ಈ ಬಗೆಯ ಹಿನ್ನೆಲೆ ಇರುವಾಗ ಬ್ರಿಟನ್ನಿನ ನಾರಿನ ವ್ಯಾಪಾರಿಗಳು ಹಿಂದುಸ್ತಾನ ಬ್ರಿಟನ್ನುಗಳ ನಡುವಿನ ಭಾವೀ ನಾರಿನ ವ್ಯಾಪಾರ ಸಂಬಂಧ ಸಡಿಲಬಹುದೆಂಬ ಭೀತಿ ವ್ಯಕ್ತ ಮಾಡಿದ್ದೇನು ಆಶ್ಚರ್ಯದ ಮಾತಲ್ಲ. ಹಿಂದುಸ್ತಾನದ ಬದಲಾದ ಪರಿಸ್ಥಿತಿಯಿಂದ ದುಂಡಿಯ ನಾರಿನ ಉದ್ಯೋಗಕ್ಕೆ ಗಂಡಾಂತರವೆಂದು ಕಂಡು ಹಿಡಿದವರಲ್ಲಿ ಲಂಡನ್ ಅರ್ಥಿಕ ಮಹಾವಿದ್ಯಾಲಯದ ಡಾ. ಜೆ. ಎ. ಬೋವೇ ಎಂಬವರೂ ಒಬ್ಬರಾಗಿದ್ದಾರೆ. "ತನ್ನ ಮಗುವೆಂದು ತಿಳಿದು ಕೈತುತ್ತು ಹಾಕಿ ಪೋಷಿಸುತ್ತ ಬಂದ ದುಂಡಿಗಿಂತ ಎಂಟುಪಟ್ಟು ಹೆಚ್ಚು ನಾರಿನ ವ್ಯವಹಾರವುಳ್ಳ ಹಿಂದುಸ್ತಾನವೇ ಇಂದು ದುಂಡಿಗೆ ಅರ್ಧಚಂದ್ರ ಪ್ರಯೋಗ ಮಾಡುವ ಸಂಭವವಿದೆ" ಎಂಬುದಾಗಿ ಡಾ. ಬೋವೆಯವರು ಉದ್ಗಾರ ತೆಗೆದಿದ್ದಾರಂತೆ. ದುಂಡಿಯ ಈ ಪ್ರಮುಖ ವ್ಯವಸಾಯವು ಜೀವಂತ ಇರಬೇಕಾದರೆ ಹಿಂದುಸ್ತಾನದ ನಾರಿನ ಒಟ್ಟು ನಿರ್ಯಾತದ ನಾಲ್ಕರಲ್ಲೊಂದು ಭಾಗ ನಾರನ್ನಾದರೂ ಅದು ಪಡೆಯುವದು ಅತ್ಯವಶ್ಯವಾಗಿದೆ. ದುಡಿಮೆಗಾರರ ಕೊರತೆಯಿಂದ ಮೊದಲೇ ದುಂಡಿಯ ವ್ಯವಸಾಯವು ಕುಗ್ಗಿರಲು ಸಾಲದ್ದಕ್ಕೆ ಹಿಂದುಸ್ತಾನದ ವಿಚ್ಛೇದವೂ ಜಾತೀಯ ಅಸಾಹುತಗಳೂ ಅದಕ್ಕೆ ಇನ್ನೂ ಹೆಚ್ಚಿನ ಪೆಟ್ಟುತಗುಲಿಸಿವೆ.

...೧೨ನೇ ಪುಟಕ್ಕೆ

# ಕರ್ನಾಟಕ

## ಧಾರವಾಡ

ಸಿಂಧ ಪಂಜಾಬ ನಿರಾಶ್ರಿತರ ಸಹಾಯದ ಬಗ್ಗೆ ಬ್ಯಾಡಗಿಯ ಜನರು ಕೊಟ್ಟಂಥ ೨೦ ಪೌಂಡಿನ ಮೂರು ಗಂಟುಗಳನ್ನು ಶ್ರೀ ದಾನಪ್ಪಾ ಕಬ್ಬೂರರ ನೇತೃತ್ವದಲ್ಲಿ ಕಳಿಸಲಾಗಿದೆ. ಸಹಾಯ ಬಯಸುವವರು ಬಸಪ್ಪಾ ಕೋರಿಶೆಟ್ಟರ ಮತ್ತು ಪಂಚಪ್ಪಾ ಕಬ್ಬೂರ ಇವರ ಕಡೆಗೆ ಕಳಿಸಬೇಕು.

ಹುಬ್ಬಳ್ಳಿಯಲ್ಲಿ ಪಣಿಕಾ ವಸ್ತ್ರ ಭಾಂಡಾರದಲ್ಲಿ ೭ ನೇ ತಾರೀಕು ರಾತ್ರಿ ಮೇಲಟ್ಟದ ಕಿಡಕಿಯ ಕಬ್ಬಿಣ ಸಲಾಕಿಗಳನ್ನು ಮುರಿದು ಜರದ ಸಾದಾ ಸುಮಾರು ೭೩ ಶೀರೆಗಳನ್ನು ಕಳವು ಮಾಡಿಕೊಂಡು ಹೋಗಿರುತ್ತಾರೆ. ಈ ಅಂಗಡಿ ನಗರದ ಪ್ರಮುಖ ಬೀದಿಯಲ್ಲಿ ಪೋಲೀಸ ಕಚೇರಿಯ ಸಮೀಪದಲ್ಲಿಯೆ ಇರುವದು.

ಹುಬ್ಬಳ್ಳಿಯಲ್ಲಿ ಶ್ರೀ ಕುಮಾರ ಸ್ವಾಮಿಗಳ ಹೆಸರಿನಲ್ಲಿ ಹರಿಜನ ಮೊದಲು ಮಾಡಿಕೊಂಡು ಎಲ್ಲ ಜಾತಿಯವರ ಸಲುವಾಗಿ ಶ್ರೀ ಕುಮಾರೇಶ್ವರ ಹರಿಜನ ಫ್ರೀ ಬೋರ್ಡಿಂಗು ಪ್ರಾರಂಭವಾಗಲಿದೆ. ಸಾರ್ವಜನಿಕರೆಲ್ಲ ಉದಾರ ಹಸ್ತದಿಂದ ಸಹಾಯ ಮಾಡಬೇಕಾಗಿ ಬಿನ್ನವಿಸಲಾಗಿದೆ.

ಪ್ರತಿ ತಿಂಗಳ ಕೊನೆಯ ರವಿವಾರ ಕರ್ನಾಟಕ ಏಕೀಕರಣ ದಿನವನ್ನು ಆಚರಿಸಬೇಕೆಂದು ಏಕೀಕರಣ ಮಹಾ ಸಮಿತಿಯವರು ನಿರ್ಧರಿಸಿದ್ದಾರೆ. ಅಂದು ಪ್ರಭಾತಫೇರಿ ರಾಷ್ಟ್ರ ಧ್ವಜವಂದನೆ ಹಾಗು ಸಾಯಂಕಾಲ ಸಾರ್ವಜನಿಕ ಸಭೆ ಸೇರಿಸಿ ಏಕೀಕರಣದ ಬಗ್ಗೆ ಉದ್ಬೋಧಕ ಉಪನ್ಯಾಸವನ್ನು ಮಾಡಿ ಕರ್ನಾಟಕ ಸ್ವತಂತ್ರ ಪ್ರಾಂತದ ಬೇಡಿಕೆಯ ಬಗ್ಗೆ ಘಟನಾ ಸಮಿತಿಯ ಅಧ್ಯಕ್ಷರಿಗೆ ತಿಳಿಸಬೇಕೆಂದು ಪ್ರಕಟಿಸಲಾಗಿದೆ.

ಧಾರವಾಡ ಜಿಲ್ಹೆಯಲ್ಲಿ ತುಂಗಭದ್ರಾ ದಂಡೆಯಲ್ಲಿ ಎತ್ತರವಾದ ಸ್ಥಳದಲ್ಲಿ ಎಂಜಿನ್ ಕೂಡಿಸಿ ೨೫ ಸಾವಿರ ಎಕರೆಗೆ ನೀರು ಪೂರೈಸಿ ಈ ಸಲ ಇನ್ನೊಂದು ಬೆಳೆ ತೆಗೆದುಕೊಳ್ಳುವ ಏರ್ಪಾಡು ಮಾಡಲಾಗುವದೆಂದೂ ೬೦ ಅಶ್ವಶಕ್ತಿಯ ಮೂರು ಎಂಜಿನಗಳನ್ನು ಹಾಕಲಾಗುವದೆಂದೂ ತಿಳಿಯುತ್ತದೆ. ಇದೇ ರೀತಿ ಬೆಳಗಾವಿ ವಿಜಾಪೂರ ಜಿಲ್ಹೆಗಳಲ್ಲಿ ಕೃಷ್ಣಾ ನದಿಯಿಂದ ನೀರು ಪೂರೈಸಲಾಗುವದೆಂದೂ ತಿಳಿಯುತ್ತದೆ. ಬರುವ ವರ್ಷ ಹೊರಗಿನಿಂದ ಆಹಾರಧಾನ್ಯ ಕಡಮೆ ತರಿಸುವದನ್ನು ತುಂಬಿಕೊಳ್ಳುವುದಕ್ಕಾಗಿ ಹೀಗೆ ಮಾಡಲಾಗುವದು.

ಕರ್ನಾಟಕ ಏಕೀಕರಣ ಪತ್ರಿಕೆಯ ಬಗ್ಗೆ ೨೫ ಲಕ್ಷ ಜನರ ಸಹಿಗಳನ್ನು ಕಳಿಸಬೇಕೆಂದು ಏಕೀಕರಣ ಸಮಿತಿಯವರು ನಿರ್ಧರಿಸಿದ್ದಾರೆ.

ಗದುಗಿನ ರೆಸಿಡೆಂಟ್ ಮ್ಯಾಜಿಸ್ಟ್ರೇಟರು ಜೂಜಾಟದ ಸಂಬಂಧದಲ್ಲಿ ಈರಪ್ಪ ಆಲೂರ [illegible] ಜನರಿಗೆ ೫೦ ರೂಪಾಯಿ ದಂಡ, [illegible] ಕೊಟ್ಟ ಬಗ್ಗೆ ಈರಪ್ಪನಿಗೆ [illegible] ೫೦ ರೂಪಾಯಿ ದಂಡ ೧ ತಿಂಗಳ ಶಿಕ್ಷೆ ವಿಧಿಸಿದರು.

## ಶ್ರೀ ಗುರುಸಾರ್ವಭೌಮ ಸಂಸ್ಕೃತ ಕಾಲೇಜು

ಮಂತ್ರಾಲಯದಲ್ಲಿ ಶ್ರೀ ಜಗದ್ಗುರು ನಂಜನಗೂಡು ಶ್ರೀ ರಾಘವೇಂದ್ರ ಸ್ವಾಮಿಗಳವರ ಮಠದ ಶ್ರೀ ಸುಯಮೀಂದ್ರ ಸ್ವಾಮಿಗಳವರ ನೇತೃತ್ವದಲ್ಲಿ ಶ್ರೀ ಗುರುಸಾರ್ವಭೌಮ ಸಂಸ್ಕೃತ ಕಾಲೇಜಿನ ವಾರ್ಷಿಕೋತ್ಸವ ತಾ. ೨೯-೩೦-೩೧ ರಲ್ಲಿ ವಿಜೃಂಭಣೆಯಿಂದ ಜರುಗಿತು. ವಾರ್ಷಿಕ ವರದಿ ವಾಚನ ಮೊದಲನೆ ದಿನ ನಡೆಯಿತು. ತಾ. ೨೯ ಕ್ಕೆ ಶ್ರೀ ಗೋಪಾಲದಾಸರ ಹರಿಕಥೆ ನಡೆಯಿತು. ೩೦ ಕ್ಕೆ ಶ್ರೀ ರಾ. ಸ್ವಾ. ಪಂಚಮುಖಿ ಎಂ ಎ ಇವರ ಉಪನ್ಯಾಸವಾಯಿತು ಮತ್ತು ಉಳಿದವರ ಉಪನ್ಯಾಸಗಳೂ ನಡೆದವು ಪ್ರತಿ ರಾತ್ರಿ ಶ್ರೀ ಸುಧೀಂದ್ರ ಸ್ವಾಮಿಗಳು ರಚಿಸಿದ ಸುಭದ್ರಾ ಪರಿಣಯವೆಂಬ ಸಂಸ್ಕೃತ ನಾಟಕವನ್ನು ಅಭಿನಯಿಸಲಾಯಿತು. ರಾಜಾ ಶ್ರೀ ಗುರುರಾಜಾಚಾರ್ಯರ ಅರ್ಜುನಪಾತ್ರಾಭಿನಯ ಅದ್ವಿತೀಯವಾಗಿತ್ತು. ಪ್ರಿನ್ಸಿಪಾಲರ ಉಪಸಂಹಾರದ ನಂತರ ಸಭೆ ಕೊನೆಗೊಂಡಿತು.

## ವಿಜಾಪುರ

ಕಳೆದ ತಿಂಗಳು ೨೫ಕ್ಕೆ ಶಿವಣಗಿಯಲ್ಲಿ ಸುಮಾರು ೨೦ ಸಶಸ್ತ್ರ ಜನರು ದಾಂಡು ದರೋಡೆ ಹಾಕಿ ಹಲವರನ್ನು ಗಾಯಗೊಳಿಸಿ ಕೆಲವು ಆಭರಣಗಳನ್ನು ಅಪಹರಿಸಿಕೊಂಡುಹೋಗಿದ್ದರು. ಸಬ್ ಇನಸ್ಪೆಕ್ಟರ ಶ್ರೀ ಪಠಾಣ ಇವರು ಕನಮಡಿಯಲ್ಲಿ ಇವರನ್ನು ಬಂಧಿಸಿರುವರು. ಈ ಜನರ ಮುಖಂಡನಾದ ಕಲ್ಲನಗೌಡ ವೀರಪ್ಪಗೌಡ ಪಾಟೀಲ (ಬಂತಿಂಗಟಿಪ್ಪರಸಿಯರ) ಎಂಬವರನ್ನೂ ಬಂಧಿಸಿರುವರು ಅವರ ಹತ್ತಿರ ೮ ಪಿಸ್ತೂಲು ೪-೫ ಕಾಡತೂಸುಗಳು ಸಿಕ್ಕಿವೆ.

ವಿಜಾಪುರದಲ್ಲಿ ೨೦ ಹರಿಜನ ಕುಟುಂಬಗಳಿಗೆ ಅಂದರೆ ಸುಮಾರು ೬೦ ಜನರಿಗೆ ಹಗ್ಗ ಹೊಸೆಯಲು ತರಬೇತಿ ಕೊಡಬೇಕೆಂದು ಗ್ರಾಮೋದ್ಯೋಗ ಸಮಿತಿಯವರು ಮಾಡಿದ ಯೋಜನೆಗೆ ಮುಂಬಯಿ ಸರಕಾರದವರು ಅಪ್ಪಣೆಯಿತ್ತಿದ್ದಾರೆ. ಮಂಜೂರ ಮಾಡಿರುವರು.

ಬಾಗಲಕೋಟೆಯ ನಗರ ಸಭೆಯ ಸದಸ್ಯರಾದ ಶ್ರೀ [illegible] ಸದಸ್ಯರಾದ ಶ್ರೀ [illegible] ಸಿಪಾಯರ ಇವರಿಗೆ ಗುಂಡು ಹಾಕುವ ಬೆದರಿಕೆ ತೋರಿಸಿದರೆಂದು ನಡೆದ ಖಟ್ಲೆಯಲ್ಲಿ ನ್ಯಾಯಕೋರ್ಟಿನವರು ಶಿಕ್ಷೆಯನ್ನು ೬ ತಿಂಗಳು ಸಕ್ತ್ರಮ ಮತ್ತು ೧೦೦ರೂ ದಂಡ ಕೊಡದಿದ್ದರೆ ಮತ್ತೆ ೧೫ ದಿನಗಳ ವರೆಗೆ ವಿಧಿಸಿದರು.

ಪೂರೈಕೆ [illegible] ಶ್ರೀ ಕೇಶವರಾವ ಕೊಡಗಲಿಯವರು ಮತ್ತು ವ್ಯಾಕ್ಸಿನೇಟರ ಶ್ರೀ [illegible] ಲಂಚ ತಿಂದರೆಂದು ಹಾಕಿದ ಖಟ್ಲೆಯಲ್ಲಿ ಇಬ್ಬರೂ ನಿರ್ದೋಷಿಗಳೆಂದು ಬಿಡುಗಡೆ ಹೊಂದಿದರು.

[illegible]

[illegible]

## ಬೆಳಗಾವಿ

[illegible]

[illegible] ಎಸ್. ಎ. [illegible] ಬಿ. ಎಸ್. [illegible]

## ಕನ್ನಡ ಸಂಸ್ಥಾನ

[illegible] ಎಚ್ ಮಹಾಡಿಕ ಇವರು ಆರಿಸಿ ಬಂದರು. ಮುಸಲ್ಮಾನ ಸ್ತ್ರೀ. ಹಾಗು ಹರಿಜನ ಮತದಾರ ಸಂಘಗಳಿಗೆ ಅನುಕ್ರಮವಾಗಿ ಶ್ರೀ. ಖುರಾಶಿ ಶ್ರೀಮತಿ ಲೀಲ ಮತ್ತು ಎಂ. ಶಿ. ಸಾತಪುರೆಯವರು ಆರಿಸಿಬಂದರು.

ದಕ್ಷಿಣ ಸಂಸ್ಥಾನ ಒಕ್ಕೂಟ ಯೋಜನೆಯ [illegible] ತಾರೀಕು ರಬಕವಿಯಲ್ಲಿ ಹರತಾಳ ಆಚರಿಸಿದ್ದರ ಸಂಬಂಧದಲ್ಲಿ ಪೋಲೀಸರು ಶ್ರೀ ತೆಂಗಿನಕಾಯಿಯವರ ಜವಾಬು ತೆಗೆದುಕೊಂಡರು. ಒಕ್ಕೂಟ ಯೋಜನೆ ರಚನೆಯಲ್ಲಿ ಕನ್ನಡಿಗರ ರಾಜಕೀಯ ಹಕ್ಕು ಬಾಧ್ಯತೆಗಳು ಮರ್ಲಕ್ಷಿಸಲ್ಪಟ್ಟವೆ. ಐಕ್ಯಾಯಿಂದ ಇದನ್ನು ಹೇರಿದರೆ ಪ್ರತಿಭಟಿಸುವದು ಪ್ರತಿಯೊಬ್ಬ ಕನ್ನಡಿಗನ ಕರ್ತವ್ಯವಾಗಿದೆಂದು ಮುಂಚಾಗಿ ಅವರು ತಮ್ಮ ಜವಾಬಿನಲ್ಲಿ ಹೇಳಿರುವರಂತೆ.

# ಹಿಂದೂಸ್ಥಾನ

## ಮುಂಬಯಿ

ಎರಡೂ ಮಹಾಯುದ್ಧಗಳಲ್ಲಿ ಮಡಿದ ವೀರರ ಸ್ಮರಣೆ ಮಾಡಲು ೯ ತಾ. ನಂದು ಹನ್ನೊಂದು ಗಂಟೆಗೆ ಎರಡು ನಿಮಿಷ ಮೌನವನ್ನಾಚರಿಸಬೇಕೆಂದು ಅರಸರು ವಿನಂತಿಸಿದ ಮೇರೆಗೆ ಮುಂಬಯಿಯಲ್ಲಿ ಇಂದು ಆ ಹೊತ್ತಿಗೆ ರೇಲ್ವೆ, ಟ್ರಾಮು ಮೊದಲಾದ ಎಲ್ಲ ವಾಹನಗಳ ಓಡಾಟ ಕಟ್ಟಾಗಿತ್ತು. ಕೂಪರ ಮೈದಾನ, ಶಿವಾಜಿ ಪಾರ್ಕ ಮತ್ತು ವೈಗಾಮುದಿಂದ ತೋಫು ಹಾರಿಸಲಾಯಿತು. ಗಿರಣಿ ಮತ್ತು ವರ್ಕಶಾಪಗಳ ನಾದ ಸಲಿಕೆಗಳು ತಮ್ಮ ನಾದದಿಂದ ಈ ದಿನದ ಮಹತ್ವವನ್ನು ಸ್ಮರಣೆಗೆ ತಂದು ಕೊಟ್ಟವು.

ಜಂಡಾಂತರದ ಪ್ರಸಂಗಬಂದರೆ ಸಹಾಯ ಮಾಡಬೇಕೆಂದು ಸಂಯುಕ್ತ ದಕ್ಷಿಣ ಸಂಸ್ಥಾನದ ರಾಜ ಪ್ರಮುಖರಾದ ಔಂಧದ ರಾಜೇಸಾಹೇಬರು ಮುಂಬಯಿ ಸರಕಾರಕ್ಕೆ ಬಿನ್ನವಿಸಿಕೊಂಡಿದ್ದಾರೆ.

ಅ. ಭಾ. ಸಾಮಾಜಿಕ ಕಾರ್ಯಕರ್ತರ ಪರಿಷತ್ತು ೪ ದಿನ ಮುಂಬಯಿಯಲ್ಲಿ ಸೇರಿ ವಿಶ್ವವಿದ್ಯಾಲಯಗಳಿಗೆ ಸಾಮಾಜಿಕ ಸೇವಾ ಪದವಿಯ ಶಿಕ್ಷಣ ಪ್ರಾರಂಭಿಸುವ ಹಾಗು ಕೇಂದ್ರ, ಪ್ರಾಂತಿಕ ಮತ್ತು ಸಂಸ್ಥಾನ ಸರಕಾರಗಳಿಗೆ ಸಾಮಾಜಿಕ ಸೇವೆಯ ಪ್ರತ್ಯೇಕ ಖಾತೆ ನಿರ್ಮಿಸಿ ಎಲ್ಲ ಖಾತೆಗಳೊಡನೆ ಸಂಬಂಧ ಇಟ್ಟುಕೊಳ್ಳಲು ಓರ್ವ ಮಂತ್ರಿ ಅಥವಾ ಕಾರ್ಯದರ್ಶಿಯನ್ನು ನಿಯಮಿಸುವ ಸೂಚನೆಗಳನ್ನು ಮಾಡಿತು. ಶ್ರೀ ಜಮಶೇದ ಮೆಹತಾರವರು ಅಧ್ಯಕ್ಷರಾಗಿಯೂ ಲೇಡಿ ರಾಮರಾವ, ಪಂಡಿತ ಕುಂಝ್ರು ಮತ್ತು ಜೆ. ಸಿ. ಕುಮಾರಪ್ಪ ಅವರು ಉಪಾಧ್ಯಕ್ಷರಾಗಿಯೂ ಆರಿಸಲ್ಪಟ್ಟರು.

ಮುಂಬಯಿ ವಿಶ್ವವಿದ್ಯಾಲಯದ ಉಪಕುಲಪತಿಗಳಾದ ನ್ಯಾ. ಮೂ. ಎಂ. ಸಿ. ಛಗ್ಲಾರವರು ರಾಜೀನಾಮೆ ಕೊಟ್ಟದ್ದರಿಂದ ಆ ಹುದ್ದೆಗೆ ಪ್ರಸಿದ್ಧ ಸಂಸ್ಕೃತ ಪಂಡಿತರೂ ಹಿಂದೂ ಧರ್ಮಶಾಸ್ತ್ರದ ಇತಿಹಾಸವನ್ನು ಬರೆದವರೂ ಆದ ಮಹಾಮಹೋಪಾಧ್ಯಾಯ ಪಿ. ವಿ. ಕಾಣೆಯವರನ್ನು ನೇಮಿಸಲಾಗಿದೆ. ಹಾಯಕೋರ್ಟಿನ ವರಿಷ್ಠ ನ್ಯಾಯಮೂರ್ತಿಯ ಕೆಲಸದ ಹೆಚ್ಚಳದ ಮೂಲಕ ನ್ಯಾ. ಮೂ. ಛಗ್ಲಾರವರು ರಾಜೀನಾಮೆ ಕೊಟ್ಟರು.

ಪುಣೆಯ ಹರಿಜನ ಸೇವಕ ಸಂಘಕ್ಕೆ ವಿಶೇಷ ಪ್ರಚಾರದ ಸಲುವಾಗಿ ಮುಂಬಯಿ ಸರಕಾರವು ೩ ಸಾವಿರ ರೂಪಾಯಿ ಧನ ಸಹಾಯ ಕೊಟ್ಟಿದೆ.

## ಓಡಿಸಾ

ಅಹಮ್ಮದ ಯುಸುಫ ಎಂ. ಎಲ್. ಎ. ಅವರು ಮೌ. ಅಝಾದರು ಕರೆದ ಪರಿಷತ್ತಿಗೆ ದಿಲ್ಲಿಗೆ ಹೊರಡುವಾಗ ಒಂದು ಪ್ರಕಟನೆ ಹೊರಡಿಸಿ ಹಿಂದೀ ಒಕ್ಕೂಟದಲ್ಲಿಯ ಲೀಗನ್ನು ಇನ್ನು ವಿಸರ್ಜಿಸಬೇಕೆಂದೂ ತಂತಾನೆ ಅದು ಈಗ ಸತ್ತಿದ್ದರೂ ಅದನ್ನು ಸಾರ್ವಜನಿಕವಾಗಿ ಹುಗಿಯುವದು ಹಿಂದಿ ಮುಸಲ್ಮಾನರ ಕರ್ತವ್ಯವೆಂದೂ ಮೌ. ಅಝಾದರು ಅನುಭವಿಕರೂ ದೇಶ ಸೇವಾ ರತರೂ ಆಗಿದ್ದು ಅವರು ಹಿಂದಿ ಮುಸಲ್ಮಾನರಿಗೆ ವಿಧಾಯಕ ಮಾರ್ಗ ತೋರಿಸಿ ಕೊಡುವರೆಂದು ತಮಗೆ ವಿಶ್ವಾಸವಿದೆಯೆಂದೂ ಹೇಳಿದ್ದಾರೆ.

## ಸಂಯುಕ್ತಪ್ರಾಂತ

ಶಹರಾನಪೂರದ ಮೊಹಲ್ಲಾ ಕೃಷ್ಣಪುರದಲ್ಲಿ ಒಂದು ಗುಪ್ತ ಮದ್ದಿನ ಕಾರಖಾನೆ ಮತ್ತು ೨೦ ಮಣ ಮದ್ದು ಸಿಕ್ಕಿದೆ.

ಹಾನಸರಯೂನಬಜಾರದಲ್ಲಿ ಕೆಲವರು ಒಂದು ಅಂಗಡಿ ಲೂಟಿ ಮಾಡುತ್ತಿದ್ದಾಗ ಪೋಲೀಸರು ಗುಂಡು ಹಾರಿದರು. ಇಬ್ಬರು ಸತ್ತರು ೫ ಜನರಿಗೆ ಗಾಯವಾಯಿತು.

ಶಹರಾನಪೂರ ರೇಲ್ವೆ ಸ್ಟೇಶನದ ಹತ್ತರ ಎರಡು ಜೀವಂತ ಬಾಂಬುಗಳು ಸಿಕ್ಕಿದವು. ಸ್ಪೆಶಲ್ ಗಾಡಿಯಿಂದ ಪಾಕಿಸ್ತಾನಕ್ಕೆ ಹೊರಟ ಮುಸ್ಲಿಂ ನಿರಾಶ್ರಿತನೊಬ್ಬನ ಹಾಸಿಗೆಯಲ್ಲಿ ಈ ಬಾಂಬುಗಳಿದ್ದವು.

## ಹೊಸದಿಲ್ಲಿ

ಹಿಂದುಸ್ತಾನದ ಗವ್ಹರ್ನರ ಜನರಲ್ಲರಾದ ಲಾರ್ಡ ಮೌಂಟಬ್ಯಾಟನ್ನರು ಎಲಿಜಾಬೆಥಳ ಮದುವೆಗೆ ಇದೇ ೧೦ನೇ ದಿನಾಂಕಕ್ಕೆ ಲಂಡನ್ನಿಗೆ ಹೊರಟರು. ಮರಳಿ ೨೪ನೇ ದಿನಾಂಕಕ್ಕೆ ದಿಲ್ಲಿಗೆ ತಲಪುವರು. ಈ ಅವಧಿಯಲ್ಲಿ ಪಶ್ಚಿಮ ಬಂಗಾಲದ ಗವರ್ನರರಾದ ಶ್ರೀ ಸಿ ರಾಜಗೋಪಾಲಾಚಾರ್ಯರನ್ನು ತಾತ್ಪೂರ್ತಿಕ ಗವರ್ನರ ಜನರಲ್ಲರೆಂದು ಅರಸರು ನೇಮಿಸಿರುತ್ತಾರೆ.

ಶ್ರೀ ರಾಜಗೋಪಾಲಾಚಾರ್ಯರು ತಮ್ಮ ಮಗಳು ಮತ್ತು ಅಂಗರಕ್ಷಕ ಸಿಂಗಾರವೇಲು ಇವರೊಡನೆ ಕಲಕತ್ತೆಯಿಂದ ದಿಲ್ಲಿಗೆ ೯ನೇ ದಿನಾಂಕ ಹೋದರು.

ಜಿನಿವಾ ಪರಿಷತ್ತಿನಲ್ಲಿ ಭಾಗವಹಿಸಿ ಹಿಂದುಸ್ತಾನಕ್ಕೆ ಮರಳಿದ ಹಾಗೂ ಹವಾನಾ ಪರಿಷತ್ತಿಗೆ ಹಿಂದುಸ್ತಾನದ ಪ್ರತಿನಿಧಿಯಾಗಿ ಹೋಗಲಿರುವ ಶ್ರೀ. ದ. ಪ. ಕರಮರಕರರು ಒಂದು ಪ್ರಕಟನೆ ಹೊರಡಿಸಿ, ಜಿನಿವಾ ಪರಿಷತ್ತಿನಲ್ಲಿ ಹಿಂದೀ ಪ್ರತಿನಿಧಿಗಳ ಭಾಗ ಪರರಿಗೆ ಮೆಚ್ಚುಗೆಯಾಯಿತೆಂದು ಹೇಳಿದರು.

ಸಪ್ಟೆಂಬರ ತಿಂಗಳಲ್ಲಿ ದಿಲ್ಲಿಯಲ್ಲಿ ನಡೆದ ಗಲಭೆಯಿಂದ ಆದ ಹಾನಿಯನ್ನು ಕೆಳಗೆ ಕಾಣಿಸಿದಂತೆ ಅಂದಾಜ ಮಾಡಲಾಗಿದೆ. ಸುಮಾರು ಒಂದು ಸಾವಿರ ಜನರ ಕೊಲೆಯಾಗಿದೆ. ಆದರೆ ಮಡಿದವರ ಸಂಖ್ಯೆ ಇದಕ್ಕೂ ಹೆಚ್ಚಾಗಿದೆಯೆಂದು ಕಣ್ಣಾರೆ ಕಂಡವರು ಹೇಳುತ್ತಾರೆ. ತಾ ೨೫ ಅಗಸ್ಟದಿಂದ ೫೩ ದಿನ ಕರ್ಫ್ಯೂ ಅಜ್ಞೆ ಅಮಲಿನಲ್ಲಿತ್ತು. ಎಷ್ಟೋ ಭಾಗಗಳಲ್ಲಿ ಈಗಲೂ ಈ ಅಜ್ಞೆ ಜಾರಿಯಲ್ಲಿದೆ. ೩೦ ಸಾವಿರ ಅಂಗಡಿಕಾರರು ತಮ್ಮ ಅಂಗಡಿ ಬಿಟ್ಟು ಓಡಿ ಹೋಗಿದ್ದಾರೆ. ಮನೆ ಮಾರು ಬಿಟ್ಟು ಓಡಿ ಹೋದವರ ಸಂಖ್ಯೆ ಸುಮಾರು ೧,೮೫೦೦೦ ಉಂಟು. ಇವರಲ್ಲಿ ೧ ಲಕ್ಷಕ್ಕಿಂತ ಹೆಚ್ಚು ಜನ ಪಾಕಿಸ್ತಾನಕ್ಕೆ ಹೋಗಿರಬೇಕೆಂದೂ ಉಳಿದವರು ಕ್ರಮೇಣ ಮರಳಿ ಬರುತ್ತಿರುವರೆಂದೂ ಅಂದಾಜ ಮಾಡಲಾಗಿದೆ. ಪರಿಸ್ಥಿತಿಯನ್ನು ಎದುರಿಸಲಿಕ್ಕೆ ಪೋಲೀಸ ಮತ್ತು ಮಿಲಿಟರಿಯವರಿಗೆ ಒಟ್ಟು ೧೦ ಸಾವಿರ ಗ್ಯಾಲನ್ ಪೆಟ್ರೋಲ ವೆಚ್ಚವಾಗಿದೆ. ಈ ಗಲಭೆಯಲ್ಲಿ ಸುಮಾರು ೪೦ ಸಾವಿರ ಕೂಲಿಕಾರರು ತಮ್ಮ ಗಳಿಕೆಗೆ ಎರವಾದರು. ಹೋದ ವರ್ಷ ಸಪ್ಟೆಂಬರದಲ್ಲಿ ೧೧ ಲಕ್ಷ ರೂ. ಆದಾಯವಿದ್ದ ದಿಲ್ಲಿ ಮುನಸೀಪಾಲ್ಟಿಗೆ ಈ ಸಪ್ಟೆಂಬರದಲ್ಲಿ ೪ ಲಕ್ಷ ರೂ. ಮಾತ್ರ ಸಿಕ್ಕಿದೆ. ಇದಲ್ಲದೆ ದಿಲ್ಲಿಯ ಎಲ್ಲ ಪೋಷ್ಟ ಆಫೀಸುಗಳು ಮತ್ತು ಸುಂಕದ ಕಟ್ಟೆಗಳು ೨೫ ದಿನ ಮುಚ್ಚಲ್ಪಟ್ಟಿದ್ದವು.

ಇಂಗ್ಲಂಡದ ರಾಜಕುಮಾರಿ ಎಲಿಜಾಬೆಥಳ ವಿವಾಹದಲ್ಲಿ ಹಿಂದುಸ್ತಾನವು ಕೊಡಲಿಚ್ಛಿಸಿದ ಉಡುಗೊರೆಗಳನ್ನು ಗವ್ಹರ್ನರಜನರಲ್ಲ ಮೌಂಟಬ್ಯಾಟನ್ನರು ತಮ್ಮ ಸಂಗಡ ಒಯ್ದರು. ಇವುಗಳಲ್ಲಿ ಮೊಗಲಕಾಲದ ರತ್ನಖಚಿತ ಗೆಜ್ಜೆಗಳಿವೆ ಎಂದು ತಿಳಿಯುತ್ತದೆ. ರಾಜಕುಮಾರಿಯ ಪತಿಗೆ ಹಿಂದುಸ್ತಾನವು ಶಿವನ ಮೂರ್ತಿಯನ್ನು ಉಡುಗರೆಯಾಗಿ ಕಳುಹಿದೆ. ಹಿಂದುಸ್ತಾನದ ಪರವಾಗಿ ಗವ್ಹರ್ನರ ಜನರಲ್ ಮತ್ತು ವಿ. ಕೆ. ಕೃಷ್ಣ ಮೆನನ್ನರು ಈ ವಿವಾಹ ಸಮಾರಂಭದಲ್ಲಿ ಭಾಗವಹಿಸುವರು.

ಮಹಾತ್ಮಾ ಗಾಂಧಿಯವರು ತಾ. ೧೦ ರಂದು ಮೌ. ಅಬುಲಕಾಲಂ ಅಝಾದರೊಂದಿಗೆ ಕುರುಕ್ಷೇತ್ರದ ನಿರಾಶ್ರಿತರ ಶಿಬಿರವನ್ನು ಸಂದರ್ಶಿಸಿದರು.

## ಮದ್ರಾಸ

ಮದ್ರಾಸ ಕಾರ್ಪೋರೇಶನ್ನದ ಕಾಂಗ್ರೆಸಪಕ್ಷದ ಸಭೆ ೯ನೇ ದಿನಾಂಕಕ್ಕೆ ಸೇರಿ ಮೇಯರ ಪದಕ್ಕೆ ಡಾ. ಉಡುಪಿ ಕೃಷ್ಣರಾಯರ ಹೆಸರನ್ನು ಸೂಚಿಸಿತು. ಆಯ್ಕೆ ಮುಂದಿನವಾರ ಜರಗಲಿದೆ.

## ಪಾಕಿಸ್ತಾನ

ಕರಾಚಿಯ ಕಾರ್ಪೋರೇಶನ್ನದಲ್ಲಿ ಮುಸ್ಲಿಮೇತರರ ಬಹು ಸಂಖ್ಯೆ ಇರುವ ಕಾರಣ ಅದನ್ನು ಹೇಗಾದರೂ ಮಾಡಿ ವಿಸರ್ಜಿಸಬೇಕೆಂದು ಸಿಂಧದ ಸ್ಥಾನಿಕ ಸ್ವರಾಜ್ಯ ಮಂತ್ರಿ ಪೀರ ಇಲಾಹಿ ಬಕ್ಷರು ಹವಣಿಸುತ್ತಿದ್ದು ಕರಾಚಿಯ ನಗರಾಧ್ಯಕ್ಷರಿಗೆ ಈ ಬಗ್ಗೆ ಅವರು ಒಂದು ಬೆದರಿಕೆಯ ಪತ್ರ ಕಳಿಸಿದ್ದಾರೆ. ಸಿಂಧದ ೨೬ ನಗರ ಸಭೆಗಳಲ್ಲಿ ಈಗಾಗಲೇ ೧೦—೧೨ ನಗರ ಸಭೆಗಳು ರದ್ದು ಮಾಡಲ್ಪಟ್ಟಿವೆ.

## ಪ. ಬಂಗಾಲ

ಶ್ರೀ. ಸಿ. ರಾಜಗೋಪಾಲಾಚಾರ್ಯರ ಸ್ಥಳದಲ್ಲಿ ಸರ ಬಿ. ಎಲ್. ಮಿತ್ರ ಅವರು ಪಶ್ಚಿಮ ಬಂಗಾಲದ ಗವ್ಹರ್ನರರಾಗಿ ನಿಯಮಿಸಲ್ಪಟ್ಟಿದ್ದಾರೆ. ಅವರ ಪ್ರತಿಜ್ಞಾವಿಧಿ ೧೦ನೇ ತಾ. ನಡೆಯಿತು. ಅವರು ಆ ಕಾಲಕ್ಕೆ ಧೋತರ ಉತ್ತರೀಯ ಇತ್ಯಾದಿ ಹಿಂದೀ ಉಡುಪನ್ನು ಧರಿಸಿದ್ದರು.

ಬಂಗಾಲ ಶಾಸನ ಸಭೆಯ ಹಿಂದಿನ ಅಧ್ಯಕ್ಷರಾದ ಸಯ್ಯದ ನೌಶೇರಅಲ್ಲಿ ಹಾಗೂ ಕೆಲವು ರಾಷ್ಟ್ರೀಯ ಮುಸಲ್ಮಾನ ಪ್ರಮುಖರು ಕಲಕತ್ತೆಯಲ್ಲಿ ಕರೆದ ಪ. ಬಂಗಾಲ ಮುಸಲ್ಮಾನರ ಪರಿಷತ್ತು ಡಾ. ಆರ್. ಅಹಮ್ಮದರ ಅಧ್ಯಕ್ಷತೆಯಲ್ಲಿ ಸಾಂಗವಾಯಿತು. ಹಿಂದುಸ್ತಾನದ ಮುಸಲ್ಮಾನರೆಲ್ಲ ಹಿಂದಿ ರಾಷ್ಟ್ರೀಯ ಸಭೆಯಲ್ಲಿ ಸೇರಿ ಅದನ್ನು ಬಲಿಷ್ಠಗೊಳಿಸಬೇಕೆಂದು ಕೇಳಿಕೊಳ್ಳಲಾಯಿತು.

ಬಂಗಾಲ ಪ್ರಾಂತಿಕ ಕಾಂಗ್ರೆಸ ಕಮೀಟಿಯ ಪಶ್ಚಿಮ ಬಂಗಾಲದ ಸಭಾಸದರು ತಾ. ೯ ರಂದು ವಿಜಯ ಕುಮಾರ ಭಟ್ಟಾಚಾರ್ಯರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಪಶ್ಚಿಮ ಹಾಗೂ ಪೂರ್ವ ಬಂಗಾಲಗಳಿಗೆ ಪ್ರತ್ಯೇಕ ಎರಡು ಕಾಂಗ್ರೆಸ ಕಮೀಟಿಗಳನ್ನು ರಚಿಸಬೇಕೆಂದೂ ಅಲ್ಲಿಯವರೆಗೆ ಆ ಆ ಭಾಗದ ಸಭಾಸದರ ಪ್ರಾದೇಶಿಕ ಸಮಿತಿಗಳನ್ನು ಏರ್ಪಡಿಸಬೇಕೆಂದೂ ಕೇಳಿಕೊಂಡರು.

ಬಂಗಾಲದ ಹಿಂದಿನ ಮುಖ್ಯ ಮಂತ್ರಿಗಳಾದ ಸುಹರ್ವರ್ದಿಯವರು ಕರೆದ ಹಿಂದುಸ್ತಾನ ಮುಸಲ್ಮಾನ ಮುಖಂಡರ ಪರಿಷತ್ತು ೯ ತಾನಂದು ಮುಂಜಾನೆ ಕಲಕತ್ತೆಯಲ್ಲಿ ಪ್ರಾರಂಭವಾಯ್ತು.

## ಬಿಹಾರ

ಪಾಟನಾ ವಿಶ್ವವಿದ್ಯಾಲಯವು ಮೌ. ಅಬುಲ ಕಲಂ ಅಝಾದ ಮತ್ತೂ ಡಾ. ರಾಜೇಂದ್ರ ಪ್ರಸಾದರಿಗೆ ಡಾಕ್ಟರೇಟ ಆಫ ಲಿಟರೇಚರ ಎಂಬ ಪದವಿಯನ್ನೂ ಬಿಹಾರದ ಮುಖ್ಯ ಮಂತ್ರಿ ಶ್ರೀ. ಅನುಗ್ರಹ ನಾರಾಯಣಸಿಂಹ ಮತ್ತು ಪಾಟನಾ ವಿಶ್ವವಿದ್ಯಾಲಯದ ಹಿಂದಿನ ಉಪಕುಲಪತಿ ಶ್ರೀ. ಸಚ್ಚಿದಾನಂದಸಿಂಹ ಇವರಿಗೆ ಡಾಕ್ಟರೇಟ ಆಫ ಲಾ ಪದವಿಯನ್ನೂ ಕೊಡಲು ನಿರ್ಣಯಿಸಿದೆ.

## ಹಿಂದೀಸಂಸ್ಥಾನ

ಕಾಶ್ಮೀರ ದಾಳಿಗಾರರ ಮುಖ್ಯ ಠಾಣೆಯು ಹಜಾರಾದಲ್ಲಿದ್ದು ಅದರ ಎಲ್ಲ ಚಟುವಟಿಕೆಗಳನ್ನು ಗಡಿಪ್ರಾಂತದ ಮುಖ್ಯ ಮಂತ್ರಿಗಳಾದ ಖಾನ ಅಬ್ದುಲ್ ಕ್ವಯೂಮ ಖಾನರು ನಿರ್ದೇಶಿಸುತ್ತಿದ್ದಾರೆಂದೂ ಅವರ ತಮ್ಮಂದಿರು ಒಳಗಿಂದೊಳಗೆ ಅದರ ಸೇನಾಪತಿಗಳಾಗಿದ್ದಾರೆಂದೂ ಅಮೃತ ಬಜಾರ ಪತ್ರಿಕೆಯ ವಿಶೇಷ ಸುದ್ದಿಗಾರರು ತಿಳಿಸುತ್ತಾರೆ.

ಕಾಶ್ಮೀರದಲ್ಲಿ ದಾಳಿಮಾಡಿದವರನ್ನು ಹತ್ತಿಕ್ಕಲು ಮತ್ತು ಗಂಡಾಂತರವನ್ನು ಎದುರಿಸಲು ಹಿಂದುಸ್ತಾನ ಸರಕಾರಕ್ಕೆ ನೆರವಾಗುವದಾಗಿ ನೇಪಾಳ ಸರಕಾರವು ತಿಳಿಸಿದೆ. ೨೫೦೦೦ ಯುದ್ಧ ಕಲಾ ವಿಶಾರದ ಗುರ್ಖಾ ಸೈನಿಕರನ್ನು ಹಿಂದುಸ್ತಾನ ಸರಕಾರವು ಕೇಳಿದರೆ ೪೮ ತಾಸಿನೊಳಗಾಗಿ ಕಾಶ್ಮೀರಕ್ಕೆ ಕಳಿಸುವ ಸಿದ್ಧತೆ ಉಂಟೆಂದು ಓರ್ವ ಸರಕಾರೇತರ ವರ್ಚಸ್ವೀ ಗೃಹಸ್ಥರು ತಿಳಿಸಿದರು.

## ಚಂದಾದಾರರಲ್ಲಿ ವಿನಂತಿ

ಯಾವದೇ ಪತ್ರವ್ಯವಹಾರ ಮಾಡುವಾಗ್ಗೆ ನಿಮ್ಮ ಚಂದಾ ನಂಬರನ್ನು ಅಂದರೆ ನಾವು ನಿಮ್ಮ ವಿಳಾಸದ ಪ್ರಾರಂಭಕ್ಕೆ ಸೇರಿಸಿದ ನಂಬರನ್ನು ಬರೆದರೆ ಮಾತ್ರ ನಿಮ್ಮ ಪತ್ರಕ್ಕೆ ಲಕ್ಷಗೊಡಲಾಗುವದು. ಅವಧಿ ಮುಗಿಯುವ ಮುಂಚೆಯೇ ೧೫ ದಿನ ಪೂರ್ವದಲ್ಲಿ ವ್ಹಿ. ಪಿ. ಮಾಡಲಾಗುವದು. ವ್ಹಿ. ಪಿ. ಬೇಡಾದವರು ೧೫ ದಿನ ಮೊದಲೇ ನಮಗೆ ತಿಳಿಸಬೇಕು. ವ್ಹಿ. ಪಿ. ತಿರಸ್ಕರಿಸಿ ಹಿಂದುಗಡೆ M. O. ಮಾಡಿದರೆ ವ್ಹಿ. ಪಿ. ಖರ್ಚು ಮುರಿಯಲಾಗುವದು.

### ಕರ್ಮವೀರ ಚಂದಾ ವಿವರ

ಅಂಚೆ ವೆಚ್ಚಸಹಿತ (ಚಂದಾಹಣ ಮುಂಗಡ)

| | |
|---|---|
| ೧ ವರ್ಷಕ್ಕೆ | ೬—೪—೦ |
| ೬ ತಿಂಗಳಿಗೆ | ೩—೪—೦ |
| ೩ ,, | ೧—೧೨—೦ |

ವ್ಹಿ. ಪಿ. ಯಿಂದ ತರಿಸಿಕೊಂಡಲ್ಲಿ ಪ್ರತಿಗೆ ೬ ಆಣೆ ಹೆಚ್ಚಿಗೆ ಬೀಳುವದು.

## ದುಂಡಿಯ ಸಣಬಿನ ವ್ಯವಸಾಯಕ್ಕೆ ಗಂಡಾಂತರ

( ೧೧ ನೇ ಪುಟದಿಂದ )

ಹಿಂದುಸ್ತಾನವು ನಾರಿನ ಉದ್ಯೋಗವನ್ನು ಹೆಚ್ಚಿಸಿಕೊಳ್ಳಲು ಹವಣಿಸಬಹುದು. ಆದರೂ ವರ್ಷಂಪ್ರತಿ ೪೦ ಲಕ್ಷ ಬೇಲು ನಾರನ್ನು ನಿರ್ಯಾತಗೊಳಿಸುವದೆಂದು ಧಾರಾಳವಾಗಿ ಗ್ರಹಿಸಬಹುದು. ಯಾಕಂದರೆ ಹೀಗೆ ಮಾಡಿಯೇ ಹಿಂದುಸ್ತಾನವು ತನ್ನ ಸಂಪಾದನೆಯ ಮಟ್ಟವು ಇಳಿಮುಖವಾಗಂತೆ ಇರಿಸಿಕೊಳ್ಳಬೇಕಾಗಿದೆ. ದುಂಡಿಗೆ ೧೦ ಲಕ್ಷ ಬೇಲು ನಾರು ದೊರೆತರೆ ಸರಿ. ಇಷ್ಟರಿಂದ ಹಿಂದುಸ್ತಾನದಲ್ಲಿ ಈಗ ನಿರ್ಮಿಸಲು ಅಸದಳವಾದ ನಯನಮನೋಹರವಾದ ನಾರಿನ ವಸ್ತ್ರಗಳ ಉತ್ಪಾದನದಲ್ಲಿ ದುಂಡಿಯ ಕುಶಲ ಕೂಲಿಕಾರರೆಲ್ಲ ತೊಡಗಿಕೊಂಡಿರಬಹುದು ಎಂಬುದಾಗಿಯೂ ಹಿಂದುಸ್ತಾನದವರು ಒರಟು ಪದಾರ್ಥಗಳನ್ನು ಮಾತ್ರ ನಾರಿನಿಂದ ನಿರ್ಮಿಸಬಲ್ಲರೆಂದೂ ಮತ್ತು ಅವರು ನಯನಾಜೂಕಿಗಿಂತ ಉತ್ಪಾದನದ ಮೊತ್ತಕ್ಕಷ್ಟೇ ಮಹತ್ವಕೊಟ್ಟದ್ದಾರೆಂದೂ ಡಾ. ಬೋವೇ ಎತ್ತಿ ತೋರಿಸಿದ್ದಾರೆ. ಡಾ. ಬೋವೇ ಅವರುಹೇಳುವದು ನಿಜವಿದ್ದರೇ ಆದರೆ ಹಿಂದುಸ್ತಾನವು ನಾರಿನ ವಸ್ತ್ರ ನಿರ್ಮಾಪನದ ತನ್ನ ಧೋರಣವನ್ನು ಬೇಗ ಬದಲಿಸಿಕೊಳ್ಳುವದು ಅತ್ಯಾಗತ್ಯವಾಗಿದೆ. ಹಿಂದುಸ್ತಾನವು ನಾರಿನ ವ್ಯವಸಾಯದಲ್ಲಿ ತಾನು ಈ ವರೆಗೆ ಪಡೆದ ಅನುಭವಬಲದಿಂದ ಮತ್ತು ತನಗಿರುವ ಕಚ್ಚಾ ನಾರಿನ ವೈಪುಲ್ಯದಿಂದ ದುಂಡಿಯ ಕೆಲಸಗಾರರ ನೈಪುಣ್ಯ ಪಡೆವುದೇನು ದುಸ್ತರವಲ್ಲ; ಅಷ್ಟೇ ಅಲ್ಲ ದುಂಡಿಯವರನ್ನು ಮಿಗಿಸುವಂತಹ ಕೌಶಲ್ಯ ಸಹ ಸಂಪಾದಿಸಿಕೊಳ್ಳಬಹುದು. ಅತ್ಯಂತ ವ್ಯಾಪಕ ಔದ್ಯೋಗಿಕ ಸಾಹಸದಲ್ಲಿ ತೊಡಗಬೇಕೆನ್ನುವ ಹಿಂದುಸ್ತಾನವು ವಿಶೇಷವಾಗಿ ಹಿಂದುಸ್ತಾನದ ನಾರಿನ ವ್ಯವಸಾಯಗಾರರು ಇತ್ತ ಗಮನಿಸುವರೊ?

# ಮುಸಲ್ಮಾನರು ರಾಷ್ಟ್ರೀಯ ಸಭೆ ಸೇರಬೇಕು

## ಪಶ್ಚಿಮ ಬಂಗಾಲ ಮುಸಲ್ಮಾನ ಪರಿಷತ್ತಿನ ನಿರ್ಣಯ

ಬಂಗಾಲ ಶಾಸನ ಸಭೆಯ ಹಿಂದಿನ ಅಧ್ಯಕ್ಷರಾದ ಸಯ್ಯದ ನೌಶಾರಅಲ್ಲಿ ಹಾಗೂ ಕೆಲವು ರಾಷ್ಟ್ರೀಯ ಮುಸಲ್ಮಾನ ಪ್ರಮುಖರು ಕಲಕತ್ತೆಯಲ್ಲಿ ಪರಿಷತ್ತು ಸೇರಿಸಿದ್ದರು. ಡಾ. ಆರ್. ಅಹಮ್ಮದರು ಅಧ್ಯಕ್ಷತೆ ವಹಿಸಿದ್ದರು. ಹಿಂದುಸ್ತಾನದ ಮುಸಲ್ಮಾನರೆಲ್ಲ ಹಿಂದೀ ರಾಷ್ಟ್ರೀಯ ಮಹಾಸಭೆಯನ್ನೇ ಸೇರಬೇಕೆಂದು ನಿರ್ಣಯಿಸಲಾಯಿತು. ಎಚ್. ಎಸ್. ಸುಹ್ರವರ್ದಿಯವರು ಕರೆದ ಪರಿಷತ್ತಿನ ಬಗ್ಗೆಯೂ ಈ ಸಭೆಯಲ್ಲಿ ವಿಚಾರ ನಡೆಯಿತು. ಅವರು ಹಿಂದಿನ ರಾಜಕೀಯ ಚಟುವಟಿಕೆಗಳಿಂದ ಮತ್ತು ಕಲಕತ್ತೆಯ ಹಾಗು ಉಳಿದ ಕಡೆಗೆ ದುರ್ಘಟನೆಗಳು ಸಂಭವಿಸಿದ್ದರಿಂದ ಮತ್ತು ಅವರ ಪಾಕಿಸ್ತಾನಕ್ಕೆ ನಿಷ್ಠೆಯನ್ನು ವ್ಯಕ್ತಮಾಡಿದ್ದರಿಂದ ಅವರಿಗೆ ಹಿಂದೀ ಮುಸಲ್ಮಾನರ ಪರಿಷತ್ತನ್ನು ಕರೆಯುವ ಹಕ್ಕು ಇಲ್ಲ ಎಂದೂ ಮೌಲಾನಾ ಅಬುಲ್‌ಕಲಂ ಅಝಾದರು ಕರೆದ ಪರಿಷತ್ತಿನ ಮಾರ್ಗದರ್ಶನದಲ್ಲಿ ಸಾಗಬೇಕೆಂದೂ ನಿರ್ಧರಿಸಲಾಯಿತು.

ಮುಸ್ಲಿಂ ಲೀಗಿನ ದ್ವಿರಾಷ್ಟ್ರ ತತ್ವದ ಘಾತಕ ಪರಿಣಾಮದಿಂದ ದೇಶವಿಂದು ಬಹಳ ಅನರ್ಥಕ್ಕೀಡಾಗಿದೆ. ಆದುದರಿಂದ ಹಿಂದೀ ಮುಸಲ್ಮಾನರಿನ್ನು ಲೀಗಿನ ಬೆನ್ನು ಹತ್ತುವದನ್ನು ಬಿಟ್ಟುಗೊಡಬೇಕು ಹಿಂದುಸ್ತಾನಕ್ಕೇ ಅಚಲ ನಿಷ್ಠೆಯನ್ನು ವ್ಯಕ್ತಪಡಿಸಬೇಕು. ಜಾತೀಯತೆಯು ಹಿಂದುಸ್ತಾನಕ್ಕೆ ಅಪಾಯಕರವಾಗಿ ಪರಿಣಮಿಸಿದ್ದರಿಂದ ಸದ್ಯದ ಪರಿಸ್ಥಿತಿಯಲ್ಲಿ ಪ್ರತ್ಯೇಕ ರಾಜಕೀಯ ಸಂಸ್ಥೆ ಸ್ಥಾಪಿಸುವದು ಆತ್ಮಘಾತಕವಾಗುವದು ಮುಂತಾಗಿ ಗೊತ್ತುವಳಿಯಲ್ಲಿ ಹೇಳಲಾಗದೆ. ಪಂಡಿತ ಜವಾಹರಲಾಲರು ಕಾಶ್ಮೀರ ಸಂಬಂಧದಲ್ಲಿ ತಳೆದ ಧೋರಣಕ್ಕೆ ಬೆಂಬಲಕೊಡುವ ಗೊತ್ತುವಳಿಯು ಸ್ವೀಕೃತವಾಯಿತು.

ಶ್ರೀ. ಸುಹ್ರವರ್ದಿಯವರು ಕಲಕತ್ತೆಯಲ್ಲಿ ಮುಸಲ್ಮಾನರ ಪರಿಷತ್ತೊಂದನ್ನು ಕರೆದಿದ್ದರು. ಅವರು ತಮ್ಮ ಧೋರಣವನ್ನು ವಿವರಿಸುತ್ತ ನೆಹರು ಸರಕಾರಕ್ಕೆ ಬೆಂಬಲವನ್ನು ಕೊಡುವದಾಗಿ ಸಾರಿದರು ಹಿಂದುಸ್ತಾನ ಸರಕಾರವು ತಮಗೆ ಹಕ್ಕು ಬಾಧ್ಯತೆಗಳ ಆಶ್ವಾಸನ ಕೊಡುವದೆಂದು ಆಶಿಸಿ ಮುಸಲ್ಮಾನರು ಸ್ವಹಿತದ ಬಗ್ಗೆ ಮಾಡುವ ಪ್ರಯತ್ನಗಳನ್ನು ನಿಷ್ಠಾಭಂಗವೆಂದು ಗಣಿಸಲಾಗುವದಿಲ್ಲವೆಂದು ತಮಗೆ ವಿಶ್ವಾಸವಿದೆಯೆಂದೂ ಅವರು ಹೇಳಿದರು. ಮುಂದೆ ಕರೆಯಲಿರುವ ಮುಸಲ್ಮಾನರ ಪ್ರಾತಿನಿಧಿಕ ಪರಿಷತ್ತಿಗೆ ಇದು ಪ್ರಸ್ತಾವಿಕರೂಪವಾಗಿದೆಯೆಂದೂ ಅವರು ಅಭಿಪ್ರಾಯವನ್ನು ವ್ಯಕ್ತ ಮಾಡಿದರು.

# ಕೇಂದ್ರಕಾಯದೆ ಮಂಡಳದಲ್ಲಿ ಪ್ರಾಂತೀಕರಣ ಗೊತ್ತುವಳಿಗೆ ಪ್ರಾಶಸ್ತ್ಯ

ಕೇಂದ್ರ ಕಾಯದೆ ಮಂಡಳದಲ್ಲಿ ಕರ್ನಾಟಕ, ಮಹಾರಾಷ್ಟ್ರ, ಆಂಧ್ರ, ಕೇರಳ ಮತ್ತು ತಮಿಳು ನಾಡು ಇವುಗಳ ಪ್ರತ್ಯೇಕ ಪ್ರಾಂತ ರಚನೆಯ ಬಗ್ಗೆ ಶ್ರೀ. ಎಚ್. ವಿ. ಪಾಟಸಕರರು ಕೊಟ್ಟ ಗೊತ್ತುವಳಿಯು ೨೭ ನೆಯ ತಾರೀಕಿನ ದಿನ ಮೊದಲು ಚರ್ಚೆಗೆ ತೆಗೆದುಕೊಳ್ಳಲ್ಪಡಬೇಕೆಂದು ಗುಪ್ತಮತದಾನದಿಂದ ನಿರ್ಧರಿಸಲಾಯಿತು.

ಸದ್ಯಕ್ಕೆ ಮುಂಬಯಿ ಪ್ರಾಂತದ ಭಾಗವಾದ ಗುಜರಾತು ಹೊಸದಾಗಿ ರಚಿತವಾಗಲಿರುವ ಮಹಾರಾಷ್ಟ್ರಕ್ಕೆ ಸೇರುವದಾದಲ್ಲಿ ಈ ಬಗ್ಗೆ ಮುಂಬಯಿ ಶಾಸನ ಸಭೆಯು ಗುಜರಾತದ ಸದಸ್ಯರ ಬಹುಮತ ಸಿಕ್ಕರೆ ಮಾತ್ರ ಹೀಗೆ ಮಾಡಬೇಕು ಇಲ್ಲವಾದರೆ ಅವರ ಇಚ್ಛೆಯ ಪ್ರಕಾರ ಅದನ್ನು ಸ್ವತಂತ್ರ ಪ್ರಾಂತವನ್ನಾಗಿ ಮಾಡಬೇಕು. ಹೊಸ ಪ್ರಾಂತಗಳ ಗಡಿಗಳನ್ನು ಗಡಿ ಸಮಿತಿಯನ್ನು ನೇಮಿಸಿ ನಿರ್ಧರಿಸಿಕೊಳ್ಳಬೇಕು ಎಂದು ಗೊತ್ತುವಳಿಯಲ್ಲಿದೆ.

ಡಾ. ಪಟ್ಟಾಭಿ ಸೀತಾರಾಮಯ್ಯನವರ ರಾಷ್ಟ್ರೀಯ ಸೇವೆಯ ಕುರಿತು ಕೆಳಗಿನ ಗೊತ್ತುವಳಿ ಕೊಟ್ಟಿದ್ದಾರೆ. ಎಂಥ ಪರಿಸ್ಥಿತಿ ಬಂದರೂ ದೇಶವನ್ನು ಸಂರಕ್ಷಿಸುವದು ಶಕ್ಯವಾಗುವಂತೆ ಗಂಡಾಂತರ ಪರಿಸ್ಥಿತಿಯಲ್ಲಿ ಪ್ರಾಂತಿಕ ಸರಕಾರಗಳಿಗೆ ಶಾಂತಿ ಸುವ್ಯವಸ್ಥೆ ಕಾಯ್ದುಕೊಳ್ಳುವಲ್ಲಿ ಸಹಾಯಮಾಡಲು ಅರಾಜಕತೆ ಮತ್ತು ಸಮಾಜದ್ರೋಹಿಗಳಿಂದ ನಿಷ್ಠಾವಂತ ನಾಗರಿಕರ ರಕ್ಷಣೆಗೆ ಕೂಡಲೆ ರಾಷ್ಟ್ರೀಯ ಸೇವೆಯ ನಿರ್ಮಾಣದ ಕಾರ್ಯಕ್ಕೆ ಕೈಕೊಳ್ಳಬೇಕು. ಸ್ವಸಂರಕ್ಷಣ ಮತ್ತು ಶಸ್ತ್ರಾಸ್ತ್ರಗಳಲ್ಲಿ ತರಬೇತಿ ಶಿಕ್ಷಣಕೊಡಲು ದೇಶದಲ್ಲೆಲ್ಲ ವ್ಯವಸ್ಥೆಯಾಗಬೇಕು.

ಚರ್ಚೆಗೆ ಸ್ವೀಕೃತವಾದ ಇತರ ಗೊತ್ತುವಳಿಗಳಾವವೆಂದರೆ:—

ದಲಿತ ವರ್ಗದವರ ಪರಿಸ್ಥಿತಿಯ ಸುಧಾರಣೆಯ ಬಗ್ಗೆ ಶ್ರೀ. ವಿ. ಐ. ಮುನಿಸ್ವಾಮಿ ಪಿಳ್ಳೆ ಮಂಡಿಸಿದ ಗೊತ್ತುವಳಿ, ಬಹಳ ರಹದಾರಿಯುಳ್ಳ ಮುಖ್ಯ ರಸ್ತೆಗಳನ್ನು ಸಿಮೆಂಟ ಕಾಂಕ್ರಿಟ ಮಾಡುವ ಬಗ್ಗೆ ಡಾ. ಸುಬ್ರಮಣ್ಯರವರ ಗೊತ್ತುವಳಿ, ದೇವನಾಗರಿ ಲಿಪಿಯಲ್ಲಿಯ ಹಿಂದಿಯನ್ನು ರಾಷ್ಟ್ರಭಾಷೆಯನ್ನಾಗಿ ಮನ್ನಿಸಬೇಕೆಂಬ ಸೇಠ ಗೋವಿಂದದಾಸರ ಗೊತ್ತುವಳಿ, ಉದ್ಯೋಗಗಳ ರಾಷ್ಟ್ರೀಕರಣದ ಬಗ್ಗೆ ಶ್ರೀ. ನಾಗಪ್ಪನವರ ಗೊತ್ತುವಳಿ, ಆಹಾರ ಮತ್ತು ಬಟ್ಟೆಯ ನಿಯಂತ್ರಣ ತೆಗೆಯುವ ಬಗ್ಗೆ ಶ್ರೀ. ರೋಹಿಣೀಕುಮಾರ ಚೌಧರಿಯವರ ಗೊತ್ತುವಳಿ, ಇತ್ಯಾದಿ—

# ಅಮೇರಿಕದ ಮುದುಕರು

ಅರವತ್ತೈದು ವರ್ಷ ವಯಸ್ಸನ್ನು ಮೀರಿದ ಮುದುಕ ಮುದುಕಿಯರ ಸಂಖ್ಯೆ ಅಮೇರಿಕದಲ್ಲಿ ೧ ಕೋಟಿಗೆ ಮೀರಿದೆ. ಮೊದಲು ೧೦೦ಕ್ಕೆ ೩ರಷ್ಟು ಮುದುಕರಿದ್ದರೆ ಈಗ ೭ಕ್ಕೆ ಏರಿದ್ದಾರೆ. ಒಬ್ಬ ಮುದುಕ ದಂಪತಿಗಳು ತಿಂಗಳೊಂದಕ್ಕೆ ೧೫೦ ಪೌಂಡುಗಳನ್ನು ಖರ್ಚು ಮಾಡಬೇಕಾಗುತ್ತದೆ. ಮೇಲೆ ಕೊಟ್ಟ ಮುದುಕರಲ್ಲಿ ಅನೇಕರಿಗೆ ಸ್ವಂತ ಆದಾಯವಿಲ್ಲ.

ಸುಮಾರು ೪೦ ಲಕ್ಷ ಮುದುಕರು ಸಂಘಟಿತರಾಗಿ ಉಪಜೀವಿಕೆಯನ್ನು ಪಡೆಯುತ್ತಿದ್ದಾರೆ. ಕೆಲವರಿಗೆ ಪೆನ್ಶನ್ ಬರುತ್ತದೆ. ಬಡ ಸಂಬಳಗಾರರಿಗೆ ಅಮೇರಿಕದ ಸರಕಾರಗಳು ತಿಂಗಳಿಗೆ ೩೦ ಡಾಲರಿನಂತೆ ದಕ್ಷಿಣೆಕೊಟ್ಟು ಉಪಜೀವಿಸುವಂತೆ ಮಾಡಿವೆ. ಅಲ್ಲಲ್ಲಿ ಅಕ್ಕರೆಯ ಮನೆಗಳು ಮತ್ತು ಅನಾಥಾಲಯಗಳು ಏರ್ಪಡಿಸಲ್ಪಟ್ಟಿವೆ. ಆದರೆ ಎಲ್ಲ ಕಡೆಯಲ್ಲಿಯೂ ಅವುಗಳಲ್ಲಿ ಪ್ರವೇಶಕ್ಕಾಗಿ ಬಹುಜನರು ಕಾದುಕೊಂಡು ಬಿದ್ದಿರುತ್ತಾರೆ.

ಒಂದು ವಿಶಿಷ್ಟ ಸಂಗತಿಯೆಂದರೆ, ಆ ಒಂದು ಕೋಟಿ ಮುದುಕರಲ್ಲಿ ೨/೩ ರಷ್ಟು ಜನರು ೬೫ ವರ್ಷವಯಸ್ಸಿನಲ್ಲಿದ್ದರೂ ಯಾವುದಾದರೊಂದು ಉದ್ಯೋಗದಿಂದ ಜೀವನ ನಿರ್ವಹಣ ಮಾಡುತ್ತಿದ್ದಾರೆ. ಅಲ್ಲಲ್ಲಿ ಮುಪ್ಪಿನವರಿಗಾಗಿಯೇ ವಿಭಾಗಗಳಿವೆ. ಅವುಗಳಲ್ಲಿ ಅನೇಕ ವಿಧದವರು ದುಡಿಯುತ್ತಿದ್ದಾರೆ. ಕೆಲವೆಡೆಯಂತೂ ಅನುಭವಶಾಲಿಗಳಾದ ಈ ಮುದುಕರ ಕಾರ್ಯಕೌಶಲ ಅನಿವಾರ್ಯವಾಗಿ ಬಿಟ್ಟಿದೆ. ಆದರೂ ಎಷ್ಟೋ ಮುದುಕರು ನಿರಾಶ್ರಿತರಾಗಿ ಯುವಕರ ದರ್ಶನವನ್ನು ಪಡೆಯಬೇಕಾಗುತ್ತದೆ. ಇದರ ನಿವಾರಣೆ? "ತಾಯಿ ತಂದೆಗಳನ್ನು ಗೌರವಿಸು" ಎಂಬ ನೀತಿಯು ತರುಣ ಜನಾಂಗದ ಹೃದ್ಗತವಾಗಬೇಕಾಗಿದೆ. ಇದೊಂದು ಅಧುನಿಕವೆಂದು ಪಾಶ್ಚಾತ್ಯ ಪದ್ಧತಿಗಳನ್ನು ಕಣ್ಣುಮುಚ್ಚಿ ಅನುಕರಿಸುವ ಇಂದಿನ ಹಿಂದೀ ಯುವ ಪಾಲಕರಿಗೂ ಬೇಕಾಗಿದೆ. "ಮಾತೃದೇವೋಭವ, ಪಿತೃದೇವೋಭವ" ಎಂಬ ಸನಾತನ ತತ್ವ ಹೇಗೆ ಅಜರಾಮರವೆಂಬುದನ್ನು ಗಮನಿಸಬೇಕು. ಮತ್ತು ನಮ್ಮ ಮುದುಕ ಮುದುಕಿಯರಾದರೂ ಯಥಾಶಕ್ತಿ ದುಡಿದು ಸಮಾಜೋಪಕಾರಿಗಳಾಗಿ ಬಾಳುವ ಗುರಿಯನ್ನು ಅನುಸರಿಸಬೇಕು. ಈ ದೃಷ್ಟಿಯಿಂದ ನಮ್ಮ ತರುಣರೂ, ವೃದ್ಧರೂ ಸಮಶೋಧನೆಗೆ ಕಾರಣರಾಗುವರೇ ?

## ಬೆಂಗಳೂರು—ಮೈಸೂರು

ಬೆಂಗಳೂರು ನಗರದ ಎರಡನೇ ವಾರ್ಡಿನಲ್ಲಿ ಕಳ್ಳತನ ಹೆಚ್ಚಾಗಿದೆಯೆಂದೂ ಪೋಲೀಸರು ಈ ಬಗ್ಗೆ ಹೆಚ್ಚು ಲಕ್ಷ್ಯಕೊಟ್ಟಿಲ್ಲವೆಂದೂ ವರದಿಯಾಗಿದೆ. ಪೋಲೀಸಿನವರು ಸಾರ್ವಜನಿಕರ ರಕ್ಷಣೆಯತ್ತ ಗಮನಿಸುವರೆಂದು ನಂಬಲಾಗಿದೆ.

ಸಂಸ್ಥಾನದ ಮುಖ್ಯ ಮಂತ್ರಿಗಳಾದ ಶ್ರೀ. ಕೆ. ಚೆಂಗಲರಾಯರೆಡ್ಡಿ ಯವರು ತಾ. ೯ ರಂದು ಸಂಜೆ ವಿಮಾನದಿಂದ ಆಗಮಿಸಿದರು. ಆಗ ಅವರಿಗೆ ಅನೇಕರು ಪುಷ್ಪಹಾರ ಅರ್ಪಿಸಿದರು. ಬೆಂಗಳೂರ ನಾಗರಿಕರ ಪರವಾಗಿ ಪೌರಸಭಾಧ್ಯಕ್ಷರಾದ ಶ್ರೀ. ಎ. ಜೆ. ಖಲೀಲರು ಹಾರ ಹಾಕಿದರು.

ಇಂಡಿಯಾ ಸರಕಾರದ ಕೈಗಾರಿಕೆಯ ಸಚಿವರಾದ ಡಾ. ಶ್ಯಾಮಪ್ರಸಾದ ಮುಕರ್ಜಿ ಅವರು ವಿಮಾನ ಕಾರಖಾನೆಯ ಡೈರೆಕ್ಟರುಗಳ ಸಭೆಯ ಅಧ್ಯಕ್ಷತೆ ವಹಿಸಲು ತಾ. ೯ ರಂದು ಮಧ್ಯಾಹ್ನ ೨—೩೦ ಗಂಟೆಗೆ ದಿಲ್ಲಿಯಿಂದ ವಿಮಾನದಲ್ಲಿ ಆಗಮಿಸಿ ಹಿಂದುಸ್ಥಾನ ವಿಮಾನ ನಿಲ್ದಾಣದಲ್ಲಿ ಇಳಿದರು. ಅವರನ್ನು ದಿವಾಣರು ಬೇರೆ ಬೇರೆ ಮಂತ್ರಿಗಳೊಡಗೂಡಿ ಅತ್ಯಂತ ಸಂಭ್ರಮದಿಂದ ಸ್ವಾಗತವಿತ್ತರು. ಹಿಂದೂಮಹಾಸಭೆ ಮೊದಲಾದ ಅನೇಕ ಪ್ರಮುಖ ಸಂಸ್ಥೆಯವರೂ ಅವರನ್ನು ಸ್ವಾಗತಿಸಿದರು.

ಮೈಸೂರು ಕಾಂಗ್ರೆಸ ವರ್ಕಿಂಗ ಕಮೀಟಿಯು ತಾ. ೧೦ ರಂದು ಮಧ್ಯಾಹ್ನ ಶ್ರೀ. ಕೆ. ಚೆಂಗಲರಾಯರೆಡ್ಡಿ ಯವರ ಅಧ್ಯಕ್ಷತೆಯಲ್ಲಿ ಸಭೆ ಸೇರಿತ್ತು. ಕಾಂಗ್ರೆಸ್ಸಿನ ಆರುಜನ ಮಂತ್ರಿಗಳೂ ಸಭೆಗೆ ಬಂದಿದ್ದರು.

ಎ. ಎಂ. ಸಿ. ಸಿ. ಅಧಿವೇಶನಕ್ಕಾಗಿ ಬಂದಿರುವ ನಿರ್ಣಯಗಳು, ಇದು ವರೆಗೆ ನೂತನ ಸರಕಾರವು ಕೈಕೊಂಡ ಕ್ರಮಗಳು ಇನ್ನುಮುಂದೆ ಮಾಡಬೇಕಾದ ಕಾರ್ಯ ಮುಂತಾದುವನ್ನು ಚರ್ಚಿಸಲಾಯಿತು.

ತಾತಾವಿಜ್ಞಾನ ಶಾಲೆಯ ಡೈರೆಕ್ಟರರಾದ ಡಾ. ಜೆ. ಸಿ. ಘೋಷರ ಸ್ಥಳದಲ್ಲಿ ತಾತ್ಪೂರ್ತಿಕವಾಗಿ ಶ್ರೀ. ಇ. ವಿ. ಗಣಪತಿ ಅಯ್ಯರ ಅವರು ಡೈರೆಕ್ಟರರಾಗುವರೆಂದು ತಿಳಿಯುತ್ತದೆ.

ಬೆಂಗಳೂರ ನಗರ ಪೋಲೀಸಿನವರು ಅಲ್ಲಲ್ಲಿ ಬೇರೆ ಬೇರೆ ವಿಧವಾಗಿ ಸಾಯಕಲ್ಲು ಕಳುವುಮಾಡುತ್ತಿದ್ದ ಹಲವರನ್ನು ಬಂಧಿಸಿದ್ದಾರೆ.

ಸ್ಥಾನಿಕ ಕಾಂಗ್ರೆಸ ಕಮೀಟಿಯ ಒಪ್ಪಿಗೆ ಪಡೆಯದೆ ಕಾಂಗ್ರೆಸ ಮುಂದಾಳುಗಳು ವೈಯಕ್ತಿಕವಾಗಿ ಸಭೆ ಸಮ್ಮೇಲನ ಆಮಂತ್ರಣ ಸ್ವೀಕರಿಸಬಹುದೇ ಎಂದು ರಾಷ್ಟ್ರಪತಿಗಳಿಗೆ ಬರೆದ ಕ್ಯಾಂಟೋನಮೆಂಟ ಜಿಲ್ಹಾ ಕಾಂಗ್ರೆಸ ಕಮೀಟಿಯ ಅಧ್ಯಕ್ಷರಾದ ಶ್ರೀ. ಎಲ್. ಎಸ್. ನರಸಿಂಹಯ್ಯನವರ ಪತ್ರಕ್ಕೆ ಉತ್ತರವಾಗಿ ರಾಷ್ಟ್ರಪತಿಗಳು ಹಾಗೆ ಠರಾವು ತೆಗೆದುಕೊಳ್ಳದಿದ್ದರೆ ಒಳಿತೆಂದೂ ತಾವುಕೂಡ ಹೋದಹೋದಲ್ಲಿ ಸ್ಥಳೀಕ ಕಾಂಗ್ರೆಸ ಕಮೀಟಿಯ ಅಧಿಕಾರಿಗಳ ಅಪ್ಪಣೆಯಿಲ್ಲದೆ ಎಂದೂ ಭಾಷಣಾದಿಗಳನ್ನು ಮಾಡುವದಿಲ್ಲವೆಂದೂ ತಿಳಿಸಿದ್ದಾರೆ.

ದೇಶಸೇವೆಯನ್ನೇ ಮುಖ್ಯೋದ್ದೇಶವನ್ನಾಗಿಟ್ಟುಕೊಂಡು ಮಹಾನವಮಿಯ ದಿವಸ ಮೈಸೂರಲ್ಲಿ "ಸುದರ್ಶನ ಸಂಘ" ಎಂಬ ಹೆಸರಿನ ಸಂಸ್ಥೆಯನ್ನು ಸ್ಥಾಪಿಸಲಾಗಿದೆ.

೫ ಸಾವಿರ ಶೀಖ ಮತ್ತು ಹಿಂದು ನಿರಾಶ್ರಿತರಿಗೆ ಆಶ್ರಯ ಕೊಡಲು ಸಿದ್ಧವಿರುವದಾಗಿ ಭಾರತ ಸರಕಾರಕ್ಕೆ ಮೈಸೂರ ಸರಕಾರವು ಬರೆದಿರುವದಾಗಿ ತಿಳಿಯುತ್ತದೆ.

ತಾ. ೭ ರಂದು ರಾತ್ರಿ ಮೈಸೂರು ಕಾಂಗ್ರೆಸ ಕಚೇರಿಯಲ್ಲಿ ಶ್ರೀ. ಚೆನ್ನಯ್ಯನವರ ಅಧ್ಯಕ್ಷತೆಯಲ್ಲಿ ನಾನಾ ಕೋಮುಗಳ ಪ್ರಮುಖರ ಸಭೆ ಸೇರಿ ನಗರದ ಆಹಾರ ಸಮಸ್ಯೆಯನ್ನು ಬಗೆಹರಿಸಲು ಕಾಳಸಂತೆ ಲಂಚಗುಳಿತನಗಳನ್ನು ನಿರ್ಮೂಲಗೊಳಿಸಲು ಚರ್ಚಿಸಲಾಯಿತು.

ಮೈಸೂರ ದೇಶದಲ್ಲಿ ಮಿಲಿಟರಿ ಶಿಕ್ಷಣ ಪಡೆದಿರುವ 'ಹೋಂಗಾರ್ಡ' ಅಥವಾ ಮೈಸೂರ ಸುಭಾಸ ಆರ್ಮಿ ಎಂದು ಕರೆಯಲ್ಪಡುವ ಸೈನಿಕ ತಂಡವನ್ನು ನಿರ್ಮಿಸಬೇಕೆಂದು ನಿರ್ಧರಿಸಲಾಗಿದೆ. ಸಂಸ್ಥಾನದ ಪ್ರಜಾ ಸರಕಾರದ ಸಲುವಾಗಿ ಈ ಸೇವೆ ತನುಮನಗಳಿಂದ ದುಡಿಯುವದು.

ಸಚಿವರುಗಳಾದ ಶ್ರೀ. ಎಚ್. ಸಿದ್ದಯ್ಯ ಮತ್ತು ಮಿ॥ ಮಹಮ್ಮದ ಶರೀಫ ಮತ್ತು ಶ್ರೀ. ಟಿ. ಮರಿಯಪ್ಪನವರು ಪ್ರವಾಸಮಾಡಿದ ಕಾಲದಲ್ಲಿ ಕಸ್ತೂರಬಾನಿಧಿಗಾಗಿ ೮೫ ಸಾವಿರ ರೂಪಾಯಿಗಳು ಶಿವಮೊಗ್ಗಾ ಜಿಲ್ಹೆಯಲ್ಲಿ ಸಂಗ್ರಹವಾದುವೆಂದೂ ಇದರಲ್ಲಿ ತೀರ್ಥಹಳ್ಳಿಯ ವ್ಯಾಪಾರಿ ಶಂಕರ ಸ್ವಯಂಸೇವಕ ಶ್ರೀ ಮಂಜುನಾಥಯ್ಯನವರು ೫೦೦೦ ರೂಪಾಯಿಗಳನ್ನು ದಾನ ಮಾಡಿದ್ದಾರೆಂದೂ ಗೊತ್ತಾಗಿದೆ.

ಮೈಸೂರಿನ ಪ್ರಜೆಗಳು ಹೈದರಾಬಾದದ ಹೋರಾಟಕ್ಕೆ ಸರ್ವವಿಧವಾದ ಬೆಂಬಲ ಕೊಡಬೇಕೆಂದು ಹೈದರಾಬಾದ ಕಾಂಗ್ರೆಸ ಮುಖಂಡರಾದ ಶ್ರೀ. ಜನಾರ್ದನರಾವ ದೇಸಾಯರು ಬಸವನಗುಡಿಯ ಯುವಕ ಸಂಘದ ಆಶ್ರಯದಲ್ಲಿ ಭಾಷಣ ಮಾಡುತ್ತ ಪ್ರಾರ್ಥಿಸಿದರು. ಶ್ರೀ ಮಳವಳ್ಳಿ ವೀರಪ್ಪ ಅವರು ಅಧ್ಯಕ್ಷತೆ ವಹಿಸಿದ್ದರು.

ಕಾಮರ್ಸ ಪರೀಕ್ಷೆಯ ವ್ಯಾಸಂಗ ಕ್ರಮದಲ್ಲಿ ಷಾರ್ಟಹ್ಯಾಂಡ ವಿಷಯವನ್ನು ತೆಗೆದುಹಾಕಿಬಿಡಬೇಕೆಂದು ಒತ್ತಾಯ ಪಡಿಸುವ ನಿರ್ಣಯವೊಂದು ತಾ ೮ರಂದು ಬೆಳಿಗ್ಗೆ ಸೇರಿದ್ದ ಕಾಮರ್ಸ ವಿದ್ಯಾರ್ಥಿಗಳ ಸಭೆಯಲ್ಲಿ ಅಂಗೀಕೃತವಾಯಿತು. ಈ ಸಂಬಂಧವಾದ ಸೂಕ್ತ ಕ್ರಮ ತೆಗೆದುಕೊಳ್ಳಲು ಮತ್ತು ವಿದ್ಯಾ ಮಂತ್ರಿಗಳಲ್ಲಿ ಮನವಿಯೊಂದನ್ನು ಒಪ್ಪಿಸಲು ಕ್ರಿಯಾ ಸಮಿತಿಯೊಂದನ್ನು ಆರಿಸಲಾಯಿತು. ಈ ಸಮಿತಿಗೆ ಶ್ರೀ. ಸೂರ್ಯನಾರಾಯಣರಾಯರವರು ಆಮಂತ್ರಕರು.

ಟ್ರಾನ್ಸಪೋರ್ಟ ಲೇಬರ ಯೂನಿಯನ್ನಿನ ಶ್ರೀ. ಚಲ್ಲಂರವರು ತಾ ೭ರಂದು ಗೃಹಮಂತ್ರಿಗಳನ್ನು ಕಂಡು ದಂಡಿನ ಪೋಲೀಸರು ಅನಾವಶ್ಯಕವಾಗಿ ಟ್ರಾನ್ಸಪೋರ್ಟಬಸ್ ನೌಕರರಿಗೆ ತೊಂದರೆ ಕೊಡುತ್ತಿರುವರೆಂಬುದಾಗಿ ಅರಿಕೆ ಮಾಡಿಕೊಂಡರು. ಅಂಶವನ್ನು ಪರಿಶೀಲಿಸುವದಾಗಿ ಸಚಿವರು ಭರವಸೆಕೊಟ್ಟರು.

ಡಾ. ಮುಕರ್ಜಿಯವರನ್ನು ಎದುರುಗೊಂಡು ಸ್ವಾಗತಿಸಲು ದಿವಾನರಾದ ಸರ್ ಅರ್ಕಾಟ ರಾಮಸ್ವಾಮಿ ಮೊದಲಿಯಾರ ಅವರು ವಿಮಾನ ಹತ್ತಿರದ್ದಾಗ ನೆರೆದಿದ್ದಗುಂಪು "ಅರ್ಕಾಟರೇ ಹೊರಟುಹೋಗಿರಿ" ಎಂದು ಘೋಷಣೆ ಮಾಡಿತು.

ಡಾ. ಮುಕರ್ಜಿಯವರು ಕುಮಾರಾ ಪಾರ್ಕಿನಲ್ಲಿ ಮೈಸೂರು ಸರಕಾರದ ಅತಿಥಿಗಳಾಗಿ ಬಿಡಾರ ಮಾಡಿದ್ದಾರೆ. ಅವರು ಮೈಸೂರ ಸಂಸ್ಥಾನದಲ್ಲಿ ನವೆಂಬರ ೧೦ ಮತ್ತು ೧೧ ನೇ ತಾರೀಕು ಇದ್ದು ನವೆಂಬರ ೧೨ ನೇ ತಾರೀಕು ಕೊಯಿಂಬತ್ತೂರಿಗೆ ಪ್ರಯಾಣ ಮಾಡಿದರು.

ಹಿಂದೂ ಮಹಾಸಭೆಯ ಅಧ್ಯಕ್ಷರಾದ ಶ್ರೀ ಜಿ. ವಿ. ರಾಮಾಚಾರ, ಶ್ರೀ ಎಂ. ಲಿಂಗೇಗೌಡ, ಶ್ರೀ ಸುಬ್ಬರಾಯರು ಡಾ. ಮುಕರ್ಜಿಯವರನ್ನು ಕಂಡು ಮೈಸೂರಲ್ಲಿ ನಡೆಯುತ್ತಿರುವ ಹಿಂದೂ ಮಹಾಸಭೆಯ ಕಾರ್ಯ ವಿವರವನ್ನು ತಿಳಿಸಿದರು.

ತಾ. ೯ ರಂದು ನಾಗಪೂರ ಎರೋಡ್ರೋಮಿನಲ್ಲಿ ವಿಮಾನ ಬಂದು ನಿಂತಾಗ ಮಧ್ಯಪ್ರಾಂತದ ಮುಖ್ಯ ಮಂತ್ರಿಗಳಾದ ಪಂಡಿತ ರವಿ ಶಂಕರ ಶುಕ್ಲರವರು ಮೈಸೂರ ಪ್ರಜಾ ರಾಜ್ಯದ ಮುಖ್ಯ ಮಂತ್ರಿ ಶ್ರೀ. ಕೆ. ಚೆಂಗಲರಾಯ ರೆಡ್ಡಿಯವರನ್ನು ಕಂಡು ಅಭಿನಂದಿಸಿದರು.

ಮೈಸೂರಿನವರೂ ಈಗ ಮಧ್ಯಪ್ರಾಂತದ ಕೈಗಾರಿಕೆಯ ಶಾಖಾಧಿಕಾರಿಗಳೂ ಆದ ಡಾ.ಕೆ. ಎ. ಎನ್ ರಾಯರೂ ಇಂಜಿನಿಯರರಾದ ಶ್ರೀ. ವೈ. ರಾಮಸ್ವಾಮಿಯವರೂ ಸಚಿವ ಶ್ರೀ ಚೆಂಗಲರಾಯರೆಡ್ಡಿಯವರನ್ನು ಕಂಡು ಅಭಿನಂದನೆಗಳನ್ನು ಅರ್ಪಿಸಿದರು.

ಹೊಸದಾಗಿ ಪ್ರೊಬೇಷನರಿ ಅಸಿಸ್ಟೆಂಟ ಕಮೀಷನರ ಆಗಿರುವ ಶ್ರೀ. ಬಿ. ಎಸ್. ರಾಜಶೇಖರಪ್ಪನವರಿಗೆ ಶ್ರೀಮನ್ಮಹಾರಾಜರು ಮೈಸೂರಿನಲ್ಲಿ ಅರಮನೆಯೊಳಗೆ ತಾ. ೯ ರಂದು ಸಂದರ್ಶನ ದಯಪಾಲಿಸಿದರು. ಶ್ರೀ. ರಾಜಶೇಖರಪ್ಪನವರು ದಿವಂಗತ ಸರ್. ಕೆ. ಪಿ. ಪುಟ್ಟಣ್ಣ ಶೆಟ್ಟರ ಮೊಮ್ಮಕ್ಕಳು.




### ಶೇರಪೇಟೆ

ದೀಪಾವಳಿ ನಿಮಿತ್ತ ಈ ವಾರದಲ್ಲಿ ಶೇರಪೇಟೆ ಮುಚ್ಚಿದ್ದುದೇ ಹೆಚ್ಚು. ತೆರೆದಿದ್ದಾಗಲೂ ಪೇಟೆಯಲ್ಲಿ ಅಷ್ಟು ಉತ್ಸಾಹವಿದ್ದಿಲ್ಲ. ರಾಜಕೀಯ ಪರಿಸ್ಥಿತಿಯೆ ಅದಕ್ಕೆ ಕಾರಣ ಟಾಟಾ ಸ್ಟೀಲ್ ಡೆಫರ್ಡ ೧೭೦೨-೮-೦ ಇಂಡಿಯನ್ ಆಯರ್ನ ೩೩-೨-೦ ಬಾಂಬೇ ಡಾಯಿಂಗ್ ೧೦೫೭-೮-೦ ಸೆಂಚೂರಿ ೯೭೫-೦-೦ ಗೋಕಾಕ ೩೧೩-೦-೦ ಕೊಹಿನೂರು ೫೫೪-೦-೦ ಸ್ವದೇಶಿ ೫೭೯-೦-೦ ರಲ್ಲಿಯೂ ಬೇಲಾಪುರ ಸಕ್ಕರೆ೬೭೨-೮-೦ ಸಿಂಧ್ಯಾಸ್ಟೀಮ ೩೪-೧೦-೦ ಅಸೋಸಿಯೆಟೆಡ್ ಸಿಮೆಂಟ್ಸ ೧೫೩-೧೨-೦ ರಲ್ಲಿಯೂ ಸೆಂಟ್ರಲ್‌ಬ್ಯಾಂಕ ೮೬-೪-೦ ಇಂಪೀರಿಯಲ್ ಎಫ್. ಸಿ. ೨೨೦-೦-೦ ರಿಜರ್ವ ೧೧೭-೧೨-೦ ರಲ್ಲಿಯೂ ಮಂದಸ್ಥಿತಿಯಲ್ಲಿ ತಾ ೭ ಶುಕ್ರವಾರ ಕೊನೆಗಂಡನಂತರ ಮುಂಬಯಿಶೇರ ಪೇಟೆ ತೆರೆದೆ ಇಲ್ಲ. ಸರಕಾರಿ ಸಾಲ ಪತ್ರಗಳಲ್ಲಿ ೩॥ (೧೯೪೭-೫೦) ೧೦೦-೨-೦ ಯಲ್ಲಿದ್ದವು. ಮದ್ರಾಸ ಪೇಟೆ ತಾ ೧೦ರ ವರೆಗೆ ತೆರೆದಿದ್ದರೂ ಅಲ್ಲಿಯೂ ಬೆಲೆಗಳು ಮಂದಸ್ಥಿತಿಯಲ್ಲಿಯೇ ಇದ್ದವು. ಇಂಡಿಯಾ ಸಕ್ಕರೆ ೧೮-೦-೦ ಮೈಸೂರು ಸಕ್ಕರೆ ೫೨-೦-೦ ಬಕ್ಕಿಂಗ್‌ಹ್ಯಾಮ ಕರ್ನಾಟಕ ಮಿಲ್ ೩೧೩-೦-೦ ಮದುರಾ ಮಿಲ್ ೮೪-೪-೦ ಮೈಸೂರು ಕೆಮಿಕಲ್ ಮತ್ತು ಫರ್ಟಿಲಾಯಿಜರ ೧೩-೦-೦ ಯಲ್ಲಿ ಕೊನೆಗಂಡವು. ಮದ್ರಾಸ ಪೇಟೆಯಲ್ಲಿ ಇಷ್ಟೊಂದು ಮಂದಗತಿಯ ವ್ಯಾಪಾರ ಈಚೆಗೆ ಎಂದೂ ಆಗಿದ್ದಿಲ್ಲೆಂದು ಹೇಳಲಾಗಿದೆ.

### ಚಿನ್ನ ಬೆಳ್ಳಿ

ಚಿನ್ನದ ಧಾರಣೆ ಈ ವಾರ ೧೦೨-೧೪-೦ ಕ್ಕೆ ಹೋದರೂ ತಿರುಗಿ ಚೇತರಿಸಿ ೧೦೩-೧೩-೦ ಕ್ಕೆ ಬಂತು. ವಾಯಿದಾ ೧೦೩-೪-೦ ರಿಂದ ೧೦೩-೮-೦ ಏರಿತು. ಬೆಳ್ಳಿ (ತಯಾರಿ) ಮಾತ್ರ ೧೫೭-೧೨-೦ ರಿಂದ ೧೫೬-೧೦-೦ಕ್ಕೆ ಳಿಯಿತು. ವಾಯದಾ ೧೫೭-೧೨-೦ರಿಂದ ಬಂತು.

### ಅರಳಿ ಪೇಟೆ

ಈ ವರ್ಷದ ಹತ್ತಿಯ ಹುಟ್ಟುವಳಿಯ ಅಂದಾಜು ಅಂಕಿಯನ್ನು ಸರಕಾರ ಪ್ರಕಟಿಸಿದೆ. ೩೫, ೬೬, ೦೦೦ ಬೇಲ (೪೦೦ ಪೌಂಡ) ಹತ್ತಿ ಅಂದರೆ ಕಳೆದ ವರ್ಷಕ್ಕಿಂತ ೧೦೦ ಕ್ಕೆ ೧ ರಷ್ಟು ಹೆಚ್ಚು ಹುಟ್ಟುವಳಿ ಈ ವರ್ಷ ಕೈಗೆ ಬರುವದೆಂದು ನಂಬಲಾಗಿದೆ. ಆದರೆ ಪಾಕಿಸ್ತಾನ ಸರಕಾರ ತನ್ನ ಅರಳಿಯನ್ನು ಅನಿಯಂತ್ರಿತವಾಗಿ ನಿರ್ಯಾತ ಮಾಡಗೊಡಲಿರುವಾಗ ಹಿಂದುಸ್ತಾನ ಸರಕಾರದ ಧೋರಣ ಇನ್ನೂ ಸ್ಪಷ್ಟವಾಗಿಲ್ಲ.

ಮುಂಬಯಿ ಪೇಟೆಯಲ್ಲಿ ಅರಳಿ (ಜಾನೆವರಿ) ೪೬೦-೦-೦ ರಿಂದ ೪೬೬-೦-೦ಕ್ಕೇರಿತು. ಮಾರ್ಚ ಮೇ ಜುಲೈ ಸೆಪ್ಟೆಂಬರ ವಾಯಿದೆಗಳಲ್ಲೂ ತದ್ರೂಪ ಏರಿಕೆ ತೋರಿ ಬಂದಿದ್ದು ಅನುಕ್ರಮವಾಗಿ ೪೬೮-೮-೦, ೪೭೫-೪-೪-೦, ೪೮೩-೦-೦, ೪೮೮-೪-೦ರಲ್ಲಿ ಕೊನೆಗಂಡವು.

### ಸಾಂಗಲಿ ಪೇಟೆ

| | |
|---|---|
| ಅರಿಷಣ ಹೇರು | ೧೦೦-೧೧೦ |
| ಮೆಣಸಿನಕಾಯಿ ಹೇರು | ೧೦೦-೧೪೦ |
| ಶೇಂಗಾ ಖಂಡಿ | ೧೧೨ |

### ಹುಬ್ಬಳ್ಳಿ

| | | |
|---|---|---|
| ಹೊಸ ಜಯವಂತ ಹತ್ತಿ ನಂ. | ೧ | ೨೬೦-೨೭೦ |
| „ | ೨ | ೨೪೫-೨೦೫ |
| „ | ೩ | ೨೩೦-೨೪೫ |
| ಹಳೇ ಜಯವಂತ ಹತ್ತಿ | | ೨೭೫-೨೮೫ |
| ಜಿನ ಹೊಸದು | | ೧೮೦-೧೮೫ |
| ಜಿನ ಹಳೆದು | | ೧೯೫-೨೦೫ |
| ಡಬಲರೋಲ | | ೧೬೫-೧೮೦ |
| ಸಾಜಿನ | | ೧೬೫-೧೮೦ |
| ಅಪಲಂಡ ಹತ್ತಿ | | ೨೭೫-೨೮೫ |

## ದಕ್ಷಿಣ ಕನ್ನಡ

### ಮಂಗಳೂರು

ದವಸಧಾನ್ಯ ಸಂಗ್ರಹ ಕುರಿತು ಸಂಬಂಧಪಟ್ಟ ಹೆಚ್ಚಿನ ಅಧಿಕಾರಿಗಳು ಒಂದು ನಿಶ್ಚಿತ ಧೋರಣೆ ಅನುಸರಿಸದೆ ಕೃಷಿಕರಿಗೆ ಕಷ್ಟನಷ್ಟ ಉಂಟಾಗುವ ಹಾಗೆ ವರ್ತಿಸುತ್ತಿದ್ದಾರೆ. ಕೃಷಿಕರು ಮತ್ತು ಒಕ್ಕಲುಗಳು ಮೊದಲನೇ ಬೆಳೆಯಲ್ಲಿ ಬೆಳೆಯಿಸಿರುವ ದವಸ ಧಾನ್ಯಗಳನ್ನೆಲ್ಲ ಸಂಗ್ರಹಿಸಿ ಒಯ್ಯುವ ಪ್ರಯತ್ನವು ಹಲವು ಕಡೆ ನಡೆದಿದೆ. ಸ್ಟೋರುಗಳಿಂದಲೂ ನಾನಾ ರೀತಿಯ ಅನ್ಯಾಯಗಳಾಗುತ್ತಿವೆಯೆಂದು ದೂರಿದೆ. ಆದುದರಿಂದ ಆಹಾರ ಸಂಗ್ರಹ ಮತ್ತು ಯೋಗ್ಯ ವಿತರಣೆಯಲ್ಲಿ ಇಡೀ ಜಿಲ್ಹೆಗೊಂದೇ ಬಗೆಯ ಧೋರಣ ಅಗತ್ಯವೆಂಬುದನ್ನು ಪರ್ಯಾಲೋಚಿಸಲು ದ. ಕ. ಜಿಲ್ಹಾ ಕಾಂಗ್ರೆಸ ಕಮಿಟಿಯ ಆಶ್ರಯದಲ್ಲಿ ಆಹಾರಪರಿಷತ್ತು ನೆರೆಯಬೇಕೆಂದು ಗೊತ್ತಾಗಿದೆ.

ಗವರ್ನಮೆಂಟು ಕಾಲೇಜಿನ ತರಬೇತಿ ಪಂಡಿತರ ಸಂಘದ ಸಭೆಯೊಂದು ತಾ. ೩ ರಂದು ಶ್ರೀ ಬಿ. ವಿ. ರಮಣ, ಎಂ. ಎ. ಎಲ್. ಟಿ. ಇವರ ಅಧ್ಯಕ್ಷತೆಯಲ್ಲಿ ಜರಗಿತು.

ಇಲ್ಲಿಯ ಸೆಂಟ್ರಲ್ ಕಾಫಿ ಹೌಸ ಮಾಲಿಕರು ಕಾರಣವಿಲ್ಲದೆ, ನೋಟೀಸು ಕೂಡ ಕೊಡದೆ ಅನೇಕ ಕೆಲಸಗಾರರನ್ನು ತೆಗೆದು ಹಾಕಿದರು. ಈ ಬಗ್ಗೆ ಹೋಟೇಲು ಕೆಲಸಗಾರರು ಸ್ಥಳೀಯ ಸೋಸಿಯಲಿಸ್ಟ ಪಾರ್ಟಿಯ ನೇತೃತ್ವದಲ್ಲಿ ಮಾಲಿಕರೊಡನೆ ಮಾತುಕತೆ ನಡೆಸಿ ಅದು ನಿಷ್ಫಲವಾದ್ದರಿಂದ ತಾ. ೨ ರಿಂದ ಕೆಲಸಗಾರರು ಮುಷ್ಕರ ಹೂಡಿದ್ದಾರೆ. ಪ್ರತಿ ದಿನ ಹೋಟೇಲ ಬಾಗಿಲಲ್ಲಿ ಪಿಕೆಟಿಂಗ ನಡೆಯುತ್ತಿದೆ.

ಇದೇ ತಾ. ೨ ರಂದು ಕೂಳೂರಿನ ಪಡುಕೋಡಿ ಗ್ರಾಮದಲ್ಲಿ ಬಂಗ್ರ, ಕೂಳೂರು, ತಣ್ಣೀರುಬಾವಿ ಮತ್ತು ಪಣಂಬೂರು ಗ್ರಾಮಗಳ ಚಾಲಗೇಣಿ ಒಕ್ಕಲುಗಳ ಸಭೆಯೊಂದು ಶ್ರೀ ಮಲರೆ, ಎಸ್. ಡಿಸೋಜರ ಅಧ್ಯಕ್ಷತೆಯಲ್ಲಿ ನಡೆಯಿತು. ಕೃಷಿಕರ ಹಿತಸಾಧನೆ ಮತ್ತು ಹಕ್ಕುಬಾಧ್ಯತೆಗಳ ರಕ್ಷಣೆಯ ಬಗ್ಗೆ ಚರ್ಚೆ ನಡೆಯಿತು. ಪಡಕೋಡಿ, ಬಂಗ್ರ, ಕೂಳೂರು, ತಣ್ಣೀರುಬಾವಿ ಮತ್ತು ಪಣಂಬೂರು ಈ ಗ್ರಾಮಗಳಿಗಾಗಿ ಕೃಷಿಕ ಸಂಘ ಒಂದನ್ನು ಸ್ಥಾಪಿಸುವದು ಗೊತ್ತಾಯಿತಲ್ಲದೆ ಅನೇಕ ಗೊತ್ತುವಳಿಗಳು ತೀರ್ಮಾನಿಸಲ್ಪಟ್ಟವು.

### ಉಡುಪಿ

ಮುನಿಸಿಪಲ್ ಕೌನ್ಸಿಲ್ಲಿನ ವಿಶೇಷ ಸಭೆಯು ತಾ. ೨೮ರಂದು ಸಂಜೆ ಶ್ರೀ ಪಿ. ಉಪೇಂದ್ರ ನಾಯ್ಕರ ಅಧ್ಯಕ್ಷತೆಯಲ್ಲಿ ಜರುಗಿ ಶ್ರೀ ಎ. ಬಿ. ಕೃಷ್ಣರಾಜರು ಒಮ್ಮತದಿಂದ ನಗರ ಸಭೆಯ ಉಪಾಧ್ಯಕ್ಷರಾಗಿ ಆರಿಸಲ್ಪಟ್ಟರು.

ಶ್ರೀ ವಿಷ್ಣುಮೂರ್ತಿ ಹಯವದನ ಸ್ವಾಮಿ ಹೈಸ್ಕೂಲಿನ ಸ್ಥಾಪಕರಾದ ಶ್ರೀ ಶ್ರೀ ವಿಶ್ವೇಂದ್ರ ತೀರ್ಥ ಶ್ರೀಪಾದಂಗಳವರ ಪುಣ್ಯದಿನಾಚರಣೆಯು ಕಳೆದ ತಾ. ೨೬ರಂದು ಬಾರಕೂರ ಭಂಡಾರಕೇರಿ ಮಠಾಧೀಶರಾದ ಶ್ರೀ ವಿದ್ಯಾಮಾನ್ಯ ತೀರ್ಥ ಶ್ರೀಪಾದಂಗಳವರ ಅಧ್ಯಕ್ಷತೆಯಲ್ಲಿ ಉಡುಪಿಯ ಪೇಜಾವರ ಮಠಾಧೀಶರಾದ ಶ್ರೀ ವಿಶ್ವೇಶ ತೀರ್ಥ ಶ್ರೀಪಾದಂಗಳವರ ಸಮ್ಮುಖದಲ್ಲಿ ಜರುಗಿತು.

ಪ್ರತಿಸಲದಂತೆ ಉಡುಪಿಯ ಕರ್ನಾಟಕ ಸಂಘದವರು ತಾ. ೨೧, ೨೨, ೨೩, ೨೪ ರಂದು ನಾಡಹಬ್ಬವನ್ನು ಬಹು ವಿಜೃಂಭಣೆಯಿಂದ ನೆರವೇರಿಸಿದರು. ಪ್ರತಿದಿನವೂ ಬೆಳಿಗ್ಗೆ ಕ್ರಮವಾಗಿ ಭಾಷಣ—ಲೇಖನ-ಕಾವ್ಯವಾಚನ-ದಾಸರ ಪದಗಳ ಹಾಡುಗಾರಿಕೆಗಳ ಸ್ಪರ್ಧೆಗಳಿದ್ದು ಗೆದ್ದವರಿಗೆ ಮೆಚ್ಚುಗಳಿದ್ದುವು. ಸಂಜೆ ನಾಟಕಾಭಿನಯವೆ ಮೊದಲಾದ ವಿವಿಧ ವಿನೋದಾವಳಿಗಳಿದ್ದುವು. ಕರ್ನಾಟಕದಲ್ಲಿಯ ಸುಪ್ರಸಿದ್ಧ ಸಾಹಿತಿಗಳಾದ ಶ್ರೀ ಶಿವರಾಮ ಕಾರಂತರು ಶ್ರೀ ಜಿ. ಎನ್. ಕೇಶವಾಚಾರರು, ಶ್ರೀ ಎನ್. ಎಸ್. ಕಿಣಿಯವರು, ಶ್ರೀ ಎಚ್. ಕೆ. ರಂಗನಾಥ ಶ್ರೀ ಎಂ. ಖಾದ್ರಿ, ಶ್ರೀ ಎಂ. ಮರಿಯಪ್ಪ, ಭಟ್ ಮುಂತಾದ ಮಹನೀಯರ ಭಾಷಣಗಳಿಂದ ಉತ್ಸವಕ್ಕೆ ಅಪೂರ್ವ ಕಳೆಕಟ್ಟಿದಂತಿತ್ತು. ಉತ್ಸವದ ಯಶಸ್ಸಿಗೆ ಕಾರಣರಾದ ಶ್ರೀಗಳಾದ ಕಡೆಕಾರು ರಾಜಗೋಪಾಲ ಕೃಷ್ಣರಾಯರೂ ಕೊರಡ್ಕಲ್ ಶ್ರೀ ನಿವಾಸರಾಯರು ವಿಠಲ ಶೆಣೈಯವರೂ ಯಾವುದೇ ಬಗೆಯಿಂದ ನೆರವಾದ ಸಮಸ್ತರೂ ಅಭಿನಂದನೀಯರು.

### ಕಾರ್ಕಳ

ಅಜೆಕಾರಿನಲ್ಲಿ ಕಳೆದ ವರ್ಷ ಹೊಸದಾಗಿ ಸ್ಥಾಪಿತವಾದ ಪ್ರಾಥಮಿಕ ಸಹಕಾರ ಸ್ಟೋರಿನ ಮಹಾಸಭೆಯು ತಾ ೨ರಂದು ಜರುಗಿ ಪ್ರಗತಿಪರವಾದ ಅದರ ಕಾರ್ಯಕಲಾಪಗಳ ವರದಿಯನ್ನು ಪರಿಶೀಲಿಸಿದ ಬಳಿಕ ಹೊಸ ಕಾರ್ಯಕರ್ತರ ಆಯ್ಕೆ ನಡೆಯಿತು.

ಮೂಕೂರಿನಲ್ಲಿ ಪ್ರತಿ ಮಂಗಳವಾರ ಸಂತೆಯು ತಾ. ೯—೧೧—೪೭ರಿಂದ ಪ್ರಾರಂಭವಾಗಿರುತ್ತದೆ.

ಸಿಕಂದರಾಬಾದದಲ್ಲಿ ಅನೇಕ ತಾ ೫ರಿಂದ ೫ ೭ ನಗಳವರೆಗೆ ದಿನವೂ ರಾತ್ರಿ ೯ ರಿಂದ ಬೆಳಗಿನ ೫ ಗಂಟೆಯವರೆಗೆ ಕರ್ಫ್ಯೂ ಆಜ್ಞೆ ಜಾರಿ ಮಾಡಲಾಗಿದೆ.

# ಮಕ್ಕಳ ಓದು

ಲೇ :— ಭಗವಂತ

ಚುಟಿಕೆ ೩

ಮಕ್ಕಳು ದೊಡ್ಡವರಾಗುವವರೆಗೆ ಕುತ್ತುಗಳು—ದೇಹಪೀಡೆಗಳು ಬಹಳ. ಅದರಂತೆ ಮಕ್ಕಳ ಓದಿಗೂ ಅನೇಕ ಕುತ್ತುಗಳುಂಟು. ಅವರ ದೇಹಗಳು ನಾಜೂಕಾಗಿದ್ದಂತೆ ಅವರ ಮನೋಬುದ್ಧಿಗಳು ದೇಹಗಳಕಿಂತಲೂ ಸೂಕ್ಷ್ಮವಾಗಿರುವವು. ದೇಹದ ಜಡ್ಡುಗಳನ್ನು ಕಂಡುಹಿಡಿದು ಚಿಕಿತ್ಸೆಮಾಡುವದು ಸುಲಭ. ಆದರೆ ಮನೋಬುದ್ಧಿಗಳ ವಿಕಾಸಕ್ಕೆ ಒದಗುವ ಅಡ್ಡಿಗಳ ನಿದಾನಮಾಡಿ ಯೋಗ್ಯ ಉಪಾಯಗಳನ್ನು ಯೋಜಿಸುವದು ಬಹಳ ಕಠಿಣ. ಯಾಕಂದರೆ ಅದರ ಕಾರಣಗಳು ಬಹುಮುಖವಾಗಿರುವವು. ಅದರಿಂದಾಗುವ ಅಪಾಯಗಳೂ ಸೂಕ್ಷ್ಮವಾಗಿದ್ದಷ್ಟೂ ಪರಿಣಾಮದಲ್ಲಿ ಘೋರತರವಾಗಿರುವವು. ಅವು ಮನೋಬುದ್ಧಿಗಳನ್ನು ಕುಂಠಿಸುವದಲ್ಲದೆ ಅವುಗಳನ್ನು ವಿದ್ರೂಪಗೊಳಿಸುವವು. ಇದರಿಂದ ಅವು ಸಮಾಜಕ್ಕೆ ಕಂಟಕಪ್ರಾಯಗಳಾಗಿ ಪರಿಣಮಿಸುವವು. ಒಮ್ಮೊಮ್ಮೆ ಇಡೀ ಸಮಾಜವನ್ನೇ ಕುತ್ತಿನಲ್ಲಿ ಹಾಕುವವು. ದೇಹವು ತನ್ನಮಟ್ಟಿಗೆ ತಾನು ಹಾಳಾಗುವದು. ಆದರೆ ವಿದ್ರೂಪಗೊಂಡ ಮನೋಬುದ್ಧಿಗಳು ತಾವು ಹಾಳಾಗುವದಲ್ಲದೆ ಇಡೀ ಜನಾಂಗವನ್ನೇ ಹಾಳುಮಾಡುವವು. ಕಾರಣ ಈ ಕಡೆಗೆ ಎಷ್ಟು ಲಕ್ಷ ಪೂರೈಸಿದರೂ ಕಡಿಮೆಯೇ.

ಮಕ್ಕಳ ಓದಿಗೆ ನೇರವಾಗಿ ಸಂಬಂಧವುಳ್ಳವರು ಶಿಕ್ಷಕರು. ಅವರೇ ಮಕ್ಕಳಿಗೆ ಆದರ್ಶ. ಅವರು ಮಕ್ಕಳಿಗೆ ಕೇವಲ ಪಾಠಪ್ರವಚನಗಳನ್ನು ಕಲಿಸುವವರಷ್ಟೇ ಅಲ್ಲ. ಮಕ್ಕಳ ಮನೋಬುದ್ಧಿಗಳನ್ನು ತಿಳಿದೇ ಅಗಲಿ ತಿಳಿಯದೇ ಅಗಲಿ ಮೂರ್ತಿಗೊಳಿಸುವವರು. "ಯದ್ಯದಾಚರತಿ ಶ್ರೇಷ್ಠಃ ತತ್ತದೇವೇತರೋ ಜನಃ" ಜನರು ಶ್ರೇಷ್ಠರನ್ನು ಅನುಸರಿಸುವರು, ಮಕ್ಕಳಿಗೆ ಮಾಸ್ತರರೇ ಶ್ರೇಷ್ಠರು. ಅವರ ನಡೆನುಡಿಗಳನ್ನು ಅರಿಯದಲೇ ಅನುಸರಿಸುವರು. ಇಷ್ಟುಮಾತ್ರ ಶಿಕ್ಷಕರ ಸ್ಥಾನಮಾನಗಳ ಮಹಿಮೆಯನ್ನು ನಿರ್ದೇಶಿಸಲು ಸಾಕು. ಈಗ ಸಲ್ಪ ವಸ್ತುಸ್ಥಿತಿಯನ್ನು ವಿವೇಚಿಸುವ.

ಇತ್ತೀಚೆಗೆ ಶಿಕ್ಷಕವರ್ಗದಲ್ಲಿ ತಲೆಯೆತ್ತಿರುವ ಅಂತಃಕಲಹವು ದಿನದಿನಕ್ಕೆ ದೊಡ್ಡ ಆಕಾರವನ್ನು ತಳೆಯುತ್ತಿರುವದು. ಈ ಅಂತಃಕಲಹವು ಮಾಧ್ಯಮಿಕ ಶಿಕ್ಷಕರಲ್ಲಿ ವಿಶೇಷವಾಗಿ ಕಂಡು ಬರುತ್ತಿದೆ. ಈ ತರದ ವೈಮನಸ್ಸು ಕೆಲವು ವರ್ಷಗಳ ಹಿಂದೆ ಪ್ರಾಥಮಿಕ ಶಿಕ್ಷಕರಲ್ಲಿ ಕೆಲವು ಮಟ್ಟಿಗೆ ತಲೆಎತ್ತಿತ್ತು. ಆದರೆ ಆ ವಿಷಬೀಜವು ಈ ರೀತಿ ದೊಡ್ಡ ಸ್ವರೂಪವನ್ನು ತಾಳಲಿಲ್ಲ. ಅದಕ್ಕೆ ಆಗಿನ ಪರಿಸ್ಥಿತಿಯೇ ಕಾರಣ. ಆದರೂ ಆ ಬೀಜವು ಮೊಳೆತಿತ್ತು ಬೆಳೆಯಲಿಲ್ಲ. ಬೆಳೆಯಲು ಅವಕಾಶ ದೊರೆಯಲಿಲ್ಲ.

ಇದರಕಾರಣವೇನು ? ಇದರ ಮೂಲವು ವೇತನ ವಿಷಮತೆಯಲ್ಲಿದೆ. ಹಿಂದಕ್ಕೆ ಸಾಠೆ ಪರಾಂಜಪೆ ಸ್ಕೀಮಿನಪ್ರಕಾರ ಹೆಡ್ಮಾಸ್ತರರಿಗೆ ಮತ್ತು ೧ ನೇ ಅಸಿಸ್ಟಂಟ ಮಾಸ್ತರರಿಗೆ ಹುಡುಗರ ಸಂಖ್ಯೆಯ ಪ್ರಮಾಣದ ಮೇಲೆ ವಿಶೇಷ ಅಲಾವನ್ಸ ಕೊಡಹತ್ತಿದರು. ಇದರಿಂದ ಇತರ ಅಸಿಸ್ಟಂಟ ಮಾಸ್ತರರು ಮನನೊಂದುಕೊಳ್ಳಲು ಕಾರಣವಾಯಿತು. ಅವರು ನಿರುತ್ಸಾಹಿಗಳಾದರು. ತಮ್ಮದೇ ಆದ ಗುಣವಿಶೇಷ, ಶ್ರಮವಿಶೇಷವಿಲ್ಲದೆ ಹೆಡ್ಮಾಸ್ತರರಿಗೂ ೧ ನೇ ಅಸಿಸ್ಟಂಟ ಮಾಸ್ತರರಿಗೂ ಅಧಿಕ ವೇತನ ವಿಶೇಷ ದೊರೆಯಹತ್ತಿದ್ದು ನೋಡಿ ಇತರರು ಖಿನ್ನಮನಸ್ಕರಾದಲ್ಲಿ ಆಶ್ಚರ್ಯವೇನೂ ಇಲ್ಲ. ಇದರಿಂದ ಹೆಡ್ಮಾಸ್ತರರಿಗೆ, ನೊಂದವರಾದ ಅಸಿಸ್ಟಂಟರು ಸರಿಯಾಗಿ ಸಹಾಯ ಸಹಕಾರಗಳನ್ನು ನೀಡದಾದರು. ಅವರನ್ನು ಬೇರೆ ಜಾತಿಯವರೆಂದು ಭಾವಿಸಹತ್ತಿದರು. ಆದರೆ ಈ ವ್ಯವಸ್ಥೆಯು ಬಹಳ ದಿವಸ ನಡೆಯಲಿಲ್ಲ. ಅದರಿಂದ ಈ ಬೇಗೆಯು ಬೆಳೆಯಲಿಲ್ಲ. ಇದು ಸುದೈವವೇ! ಆದರೆ ಈ ಬೇಗೆಯು ಈಗ ಮಾಧ್ಯಮಿಕ ಶಿಕ್ಷಕರಲ್ಲಿ ಪಸರಿಸತೊಡಗಿದೆ. ಹೆಡ್ಮಾಸ್ತರರಿಗೂ ಅಸಿಸ್ಟಂಟ ಮಾಸ್ತರರಿಗೂ ಮನಸ್ತಾಪ ಬೆಳೆಯಹತ್ತಿದೆ. ಹೆಡ್ಮಾಸ್ತರರು ಏನೋ ಒಂದು ಕುಂಟನೆಪಮಾಡಿ ಮೂಲ ಸಂಘದಿಂದ ಸಿಡಿದು ಹೋಗಿ ತಮ್ಮದೊಂದು ಬೇರೆ ಸಂಘವನ್ನು ನಿರ್ಮಿಸಿಕೊಂಡಿರುವರು. ಸಕಾಲದಲ್ಲಿ ಅರಿವನ್ನು ತಂದುಕೊಂಡು ಮೂಲ ಸಂಘದಲ್ಲಿ ಪುನಃ ಸೇರ್ಪಡೆಯಾಗಬೇಕು. ಒಡಕಿನ ಕಾರಣಗಳನ್ನು ಕಿತ್ತೊಗೆಯಬೇಕು. ಅಂದರೆ ತಮ್ಮ ಕಲ್ಯಾಣವನ್ನು ಮಾಡಿಕೊಂಡಂತಾಗುವದಲ್ಲದೆ "ಮಕ್ಕಳ ಓದಿಗೆ" ಉಂಟಾದ ಕುತ್ತನ್ನು ಕಿತ್ತೊಗೆದಂತೆಯೂ ಆಗುವದು. ಶಿಕ್ಷಕ ಶಿಕ್ಷಕರಲ್ಲಿ ಒಡಕು ಹುಟ್ಟಿಸಲು, ಇಬ್ಬಣ ಮಾಡಲು ವಿಷಮವೇತನ ಪದ್ಧತಿಯು ಮುಖ್ಯವಾದಕಾರಣವೆಂದು ಮೇಲಿನ ಮಾತಿನಿಂದ ಕಂಡು ಬಾರದೆ ಇರದು. ಸಂಬಳ ಯೋಜನೆಗಳನ್ನು ತಯಾರಿಸುವವರಲ್ಲಿಯ ಅದೂರದರ್ಶಿಮನೋಗತಿಯು ಅಭ್ಯಾಸದ ಅಭಾವ ಇವೇ ಇಂಥ ಅನರ್ಥಕ್ಕೆ, ಅನ್ಯಾಯಕ್ಕೆ ಕಾರಣ ಎಂದು ಹೇಳಲಡ್ಡಿಯಿಲ್ಲ.

# ಕನ್ನಡ ನಾಡಿನ ನಿಸರ್ಗ ಸಂಪತ್ತು

( ೨ ನೇ ಪುಟದಿಂದ )

ಗದಗು ತಾಲೂಕಿನ ಕಪ್ಪತ ಗುಡ್ಡದಲ್ಲಿ ಬಂಗಾರ ದೊರೆಯುವದು. ಧಾರವಾಡಜಿಲ್ಲೆಯ ಚಿಕ್ಕಮುಳಗುಂದ ಗುಡ್ಡದ ಮೇಲೂ ಬಂಗಾರದ ಅಂಕಗಳನ್ನು ಕಾಣಬಹುದು.

ಕರ್ನಾಟಕದಲ್ಲಿ ಇನ್ನೂ ಅನೇಕ ತರದ ಉಪಯುಕ್ತ ಭೂಗರ್ಭ ಸಂಪತ್ತು ಹೊರಡುವದು. ಧಾರವಾಡ ಜಿಲ್ಲೆಯ ಮುಂಡ್ಯಾಳ ಮತ್ತು ಅಳ್ನಾವರ ಎಂಬಲ್ಲಿ ಪಾಟಿಯಕಲ್ಲು ಹೊರಡುವದು. ಇದರಂತೆ ವಿಜಯಪುರ ಜಿಲ್ಲೆಯ ಬಾಗಲಕೋಟೆ ಮತ್ತು ಕಲಾದಗಿಯ ಪಾಟಿಯಕಲ್ಲು ಹೆಸರಾದದ್ದು. ವಿಜಯಪುರದ ತಾಳಿಕೋಟಿ ಎಂಬಲ್ಲಿ ಫರಶೀಕಲ್ಲು ಹೊರಡುತ್ತಿದ್ದು ಅಲ್ಲಿ ಸಿಮೆಂಟ ಕಾರಖಾನೆಯನ್ನು ತೆಗೆಯಲಿಕ್ಕೆ ಸಾಕಷ್ಟು ಅನುಕೂಲವಿದೆ. ಸುಣ್ಣದ ಹರಳು ಕರ್ನಾಟಕದ ಪ್ರತಿಯೊಂದು ಜಿಲ್ಹೆಯಲ್ಲೂ ದೊರೆಯುತ್ತದೆ. ಪಟಿಕವು ಬಾಗಲಕೋಟೆಯ ಗುಡ್ಡದಮೇಲೆ ದೊರೆಯುವದು. ವಿಜಯಪುರದ ಸಾರವಾಡ ಮತ್ತು ಬಬಲೇಶ್ವರಗಳಲ್ಲಿ ಸೋರುಪ್ಪು ತೆಗೆಯುತ್ತಾರೆ. ಬಳ್ಳಾರಿಯ ಭಾಗದಲ್ಲಿಯೂ ಸೋರುಪ್ಪು ಹೊರಡುವದು. ಶಿವಮೊಗ್ಗಾ ಜಿಲ್ಹೆಯ ಕುಂಸಿ ಮತ್ತು ಶಂಕರ ಎಂಬಲ್ಲಿ ಮ್ಯಾಂಗನೀಜದ ಕಣಿಗಳಿವೆ. ಹಿಂದಕ್ಕೆ ಮೈಸೂರು ಸಂಸ್ಥಾನದಿಂದ ಪ್ರತಿವರುಷ ೭೦೦೦ ಟನ್ನ ಮ್ಯಾಂಗನೀಜ ಪರದೇಶಕ್ಕೆ ಕಳಿಸಲಾಗುತ್ತಿತ್ತಂತೆ. ಕರ್ನಾಟಕದಲ್ಲಿ ಅನೇಕ ತರದ ಬಣ್ಣದ ಮಣ್ಣುಗಳಿವೆ. ಇದರಿಂದ ಬಣ್ಣ ತಯಾರಿಸುವ ಉದ್ಯೋಗ ಅಭಿವೃದ್ಧಿ ಹೊಂದಬಲ್ಲದು. ಇದಲ್ಲದೆ ಮಂಗಳೂರಲ್ಲಿ ಹಂಚನ್ನು ತಯಾರಿಸುತ್ತಾರೆ. ಬಾದಾಮಿ ಗುಡ್ಡದಲ್ಲಿ ದೊರೆಯುವ ಬಿರುಸು ಕಲ್ಲಿನಿಂದ ಬೀಸುವ ಕಲ್ಲು ಮತ್ತು ಇತರ ಕಲ್ಲಿನ ವಸ್ತುಗಳನ್ನು ತಯಾರಿಸುವರು. ಕರ್ನಾಟಕದ ಒಂದೇ ಒಂದು ಕೊರತೆಯೆಂದರೆ ನಮ್ಮ ನಾಡಿನಲ್ಲಿ ಕಲ್ಲಿದ್ದಲಿ ಸಿಗುವದಿಲ್ಲ. ಆದರೆ ಇದರ ಕೊರತೆಯನ್ನು ಅಗಾಧವಾದ ಜಲಪಾತಗಳ ಶಕ್ತಿಯು ತುಂಬಿಕೊಡುತ್ತದೆ. ಹೀಗೆ ನಮ್ಮ ಕನ್ನಡನಾಡು ಖನಿಜ ಸಂಪತ್ತಿನಲ್ಲಿ ಕೊರತೆಯ ಪ್ರಾಂತವಾಗಿಲ್ಲೆಂದು ಕಂಡುಬರುತ್ತದೆ.

### ಪ್ರಾಣಿಸಂಪತ್ತು

ಕರ್ನಾಟಕದ ಮುಖ್ಯ ಉದ್ಯೋಗ ಒಕ್ಕಲತನವೆಂದು ಮೊದಲೇ ಹೇಳಲಾಗಿದೆ. ಪ್ರಾಣಿ ಸಂಪತ್ತು ಒಕ್ಕಲತನದ ಬೆನ್ನೆಲುಬು. ಅದ್ದರಿಂದ ನಮ್ಮನಾಡಿನ ಒಕ್ಕಲಿಗನ ಜೀವನ ಮಟ್ಟ ಏರಬೇಕಾದರೆ ನಮ್ಮ ಪ್ರಾಣಿ ಬಲ ಬೆಳೆಯಬೇಕು. ಕರ್ನಾಟಕ ಪ್ರಾಂತವು ಹೈನಿಗೆ ಎಂದಿನಿಂದಲೂ ಹೆಸರಾದದ್ದು. ಕನ್ನಡನಾಡಿನ ಮುಖ್ಯ ಹೈನಿನ ಪ್ರಾಣಿಗಳು ಆಕಳು ಮತ್ತು ಎಮ್ಮೆ. ನದೀತೀರದ ದನಕರುಗಳು ಬಹಳ ಹಾಲನ್ನು ಕೊಡುತ್ತವೆ. ಇದಲ್ಲದೆ ಎತ್ತುಗಳಿಂದ ನಮ್ಮಲ್ಲಿಯ ಒಕ್ಕಲತನ ಸಾಗುವದು. ಇದರಂತೆ ತೊಗಲಿನ ಉದ್ಯೋಗ ಅಭಿವೃದ್ಧಿಯಾಗಬೇಕಾದರೆ ಪ್ರಾಣಿ ಸಂಪತ್ತು ಬೇಕು. ಅದ್ದರಿಂದ ಕನ್ನಡ ಪ್ರಾಂತದಲ್ಲಿ ತೊಗಲಿನ ಉದ್ಯೋಗ ಬೆಳೆಯಲಿಕ್ಕೆ ಸಾಕಷ್ಟು ಅನುಕೂಲತೆ ಇದೆ; ಕಾರವಾರ ಅರಣ್ಯದ ಆನೆಗಳು ಸಾರಿಗೆಯ ಕೆಲಸಕ್ಕೆ ಸಹಾಯ ಆಗುತ್ತವೆ. ಅವುಗಳ ದಂತದಿಂದ ಸುಂದರ ವಸ್ತುಗಳು ತಯಾರಾಗುವವು. ದನಕರುಗಳು ಪ್ರವಾಸ ಮತ್ತು ಇತರ ಕೆಲಸಕ್ಕೆ ಉಪಯೋಗ ಬೀಳುತ್ತವೆ. ಇದರಂತೆ ನಮ್ಮ ನಾಡಿನಲ್ಲಿ ಕುರಿ ಆಡುಗಳು ಹೆಚ್ಚಾಗಿದ್ದು ಇಲ್ಲಿ ಉಣ್ಣೆ ನೇಯುವ ಕಸಬು ಚನ್ನಾಗಿ ನಡೆಯುತ್ತದೆ. ಅನೇಕ ಜನರು ಕೋಳಿಗಳನ್ನೂ ಸಾಕಿರುತ್ತಾರೆ. ಇತ್ತೀಚೆಗೆ ಕರ್ನಾಟಕದ ಕೆಲವೊಂದು ಭಾಗದಲ್ಲಿ ರೇಶಿಮೆ ಹುಳ ಸಾಕುವ ಉದ್ಯೋಗಕ್ಕೆ ಪ್ರಾಬಲ್ಯ ಬರತೊಡಗಿದೆ. ಈ ರೀತಿಯಲ್ಲಿ ಕನ್ನಡ ನಾಡಿನಲ್ಲಿ ಪ್ರಾಣಿಸಂಪತ್ತು ಹೇರಳವಾಗಿರುತ್ತದೆ.

### ಜನಬಲ

ಹೇರಳವಾಗಿರುವ ನೈಸರ್ಗಿಕ ಸಂಪತ್ತನ್ನು ಸವಿಯಲಿಕ್ಕೆ ಜನಬಲ ಬೇಕು. ಜನಬಲವೂ ನಿಸರ್ಗ ದೇವಿಯು ಕರುಣಿಸಿದ ಒಂದು ನೈಸರ್ಗಿಕ ಸಂಪತ್ತು. ನಿಸರ್ಗ ಸಂಪತ್ತಿನ ಸಂಪೂರ್ಣ ಉಪಯೋಗವಾಗಬೇಕಾದರೆ ಜನಶಕ್ತಿ ಅವಶ್ಯಕ. ಕಾರ್ಲ ಮಾರ್ಕ್ಸರಂಥ ಮೇಧಾವಿಗಳು ಜನಶಕ್ತಿಯುಂದಲೇ ಸಂಪತ್ತು ಹುಟ್ಟುವದೆಂದು ಸಾರಿದ್ದಾರೆ. ಈ ದೃಷ್ಟಿಯಿಂದ ಕರ್ನಾಟಕದಲ್ಲಿ ಜನಬಲಕ್ಕೆ ಎಳ್ಳಷ್ಟು ಕೊರತೆಯಿಲ್ಲ. ಕರ್ನಾಟಕ ಪ್ರಾಂತದ ಒಟ್ಟು ಜನಸಂಖ್ಯೆ ೧ ಕೋಟಿ ೮೩ ಲಕ್ಷ ನಾಡಿನ ವಿಸ್ತಾರಕ್ಕನುಗುಣವಾಗಿ ಈ ಜನಸಂಖ್ಯೆ ಇರುವದೆಂದು ಹೇಳಬಹುದು. ಕರ್ನಾಟಕದ ಜನದಟ್ಟಣೆ ಸಿಂಧ ಪ್ರಾಂತದಂತೆ ತೀರ ವಿರಳವಾಗಿಲ್ಲ. ಮತ್ತು ಬಂಗಾಲದಂತೆ ತೀರ ದಟ್ಟಾಗಿಯೂ ಇಲ್ಲ. ನಮ್ಮ ಭೂಮಿಯು ಹೊರಿವಷ್ಟು ಜನರು ನಮ್ಮಲ್ಲಿ ನೆಲೆಸಿರುತ್ತಾರೆ. ವಿಜಯಪೂರದಂಥ ಬಡ ಜಿಲ್ಹೆಯಲ್ಲಿ ೧. ಚ ಮೈಲಿಗೆ ೧೬೦ ಜನರು ಇರುವರು. ಆದರೆ ಕಾರವಾರದ ಪರ್ವತ ಪ್ರದೇಶದಲ್ಲಿ ಜನದಟ್ಟಣೆ ತೀರ ವಿರಳವಾಗಿರುತ್ತದೆ. ಉಳಿದ ಪ್ರದೇಶದಲ್ಲಿ ಸುಮಾರು ೨೦೦–೨೫೦ ಜನರು ಒಂದು ಚ ಮೈಲಿಗೆ ವಾಸಿಸುವರು. ಒಟ್ಟಿನಲ್ಲಿ ನಿಸರ್ಗದೇವತೆಯು ನಮ್ಮ ನಾಡಿಗೆ ಸಾಕಾಗುವಷ್ಟು ಜನಬಲವನ್ನಿತ್ತಿದ್ದಾಳೆ. ಎಂದು ಹೇಳಬಹುದು.

ಸಾರಾಂಶದಲ್ಲಿ, ಕನ್ನಡ ನಾಡಿನಲ್ಲಿ ನಿಸರ್ಗ ಸಂಪತ್ತು ಹೇರಳವಾಗಿದೆ. ಕರ್ನಾಟಕವು ಕಚ್ಚಾ ಪದಾರ್ಥಗಳ ತವರುಮನೆಯಾಗಿರುತ್ತದೆ. ಆದರೆ ನಿಸರ್ಗದೇವಿಯು ದಯಪಾಲಿಸಿದ ಸಂಪತ್ತಿನ ಸರಿಯಾದ ಲಾಭವನ್ನು ಈ ನಾಡು ಮಾಡಿಕೊಂಡಿಲ್ಲ. ೧೦೦ಕ್ಕೆ ೫೦ ರಷ್ಟು ಬ್ರಿಟಿಷ್ ಕರ್ನಾಟಕದ ಭೂಮಿಯು ಬೀಳುಬಿದ್ದಿದೆ. ಇದರಂತೆ ಅರಣ್ಯ ಸಂಪತ್ತಿನ ೧೧೦ರಲ್ಲಿ ೨೦ ಪಾಲನ್ನು ಮಾತ್ರ ನಾವು ಉಪಯೋಗ ಮಾಡಿದ್ದೇವೆ. ಹೀಗಾಗಿ ಕನ್ನಡನಾಡು ಆರ್ಥಿಕ ದೃಷ್ಟಿಯಿಂದ ತೀರ ಹಿಂದುಳಿದ ಪ್ರದೇಶವಾಗಿದೆ. ಒಟ್ಟಿನಲ್ಲಿ ಹೇಳಬೇಕಾದರೆ, ನಿತ್ಯ ಜೀವನಕ್ಕೆ ಬೇಕಾಗುವ ಪ್ರತಿಯೊಂದು ವಸ್ತುವೂ ಕನ್ನಡನಾಡಿನಲ್ಲಿ ದೊರೆಯುತ್ತದೆ. ಅದ್ದರಿಂದ ಕನ್ನಡನಾಡು ಪ್ರತ್ಯೇಕ ಪ್ರಾಂತವಾಗಿ ತನ್ನ ನಾಡಿನ ಸಾರ್ವಜನಿಕ ಜೀವನ ಮಟ್ಟವನ್ನು ಏರಿಸುವದರಲ್ಲಿ ಸಂಶಯವಿಲ್ಲ.

# ಸಾದರಸ್ವೀಕಾರ

**೧. ನಿತ್ಯ ಕರ್ಮಾನುಷ್ಠಾನ ಸಂಗ್ರಹ**

ಲೇಖಕರು:- ಮ. ಗಂಗಾಧರ ಮೂರ್ತಿಗಳು. ಪ್ರಕಾಶನ- ಶ್ರೀ ವೇದ ಶಾಸ್ತ್ರೋಜ್ಜೀವನ ಸಭಾ ಮೈಸೂರು ಪುಟಗಳು-೭೦ ಬೆಲೆ- ೧-೦-೦.

ಈ ಚಿಕ್ಕ ಹೊತ್ತಿಗೆಯಲ್ಲಿ--ಲೇಖಕರು—ಶ್ರೀತ್ರೈತ್ರಿರೀಯ ನಿತ್ಯಕರ್ಮಾನುಷ್ಠಾನ ಸಂಧ್ಯಾದಿ ವಿಧಿಗಳ ವಿವರವನ್ನು-ಚಿಕ್ಕ ಬಾಲಕರಿಗೂ-ಸುಲಭವಾಗಿ ತಿಳಿಯುವಂತೆ ಸ್ವರಚಿಹ್ನಾಂಕಿತಗಳಿಂದೊಡಗೂಡಿ-ಚಿತ್ರಿಸಿದ್ದಾರೆ. ಮಹಾಜನರು ಇದರ ಲಾಭ ಪಡೆಯಬೇಕು.

**೨. ಬಾಳ ಕನಸು**

ಲೇಖಕರು- ಕೃಷ್ಣ ಮೂರ್ತಿ ಪುರಾಣಿಕ ಪ್ರಕಾಶಕರು- ಆರ್. ವ್ಹಿ. ಜಾಹಗೀರದಾರ ಎಂ. ಎ. (ಲಂಡನ) ಧಾರವಾಡ. ಮಾರಾಟಗಾರರು- ಸರಾಜ ಪುಸ್ತಕಾಲಯ ಗಾಂಧಿ ಚೌಕ ಧಾರವಾಡ. ಪುಟಗಳು-೫೨ ಬೆಲೆ- ೧-೮-೦.

**೩. ಸಾಹಸ [ಐದಂಕದ ನಾಟಕ]**

ಲೇಖಕರು- ಬಿ. ಬುಜಂಗರಾವ ಬಿ. ಎ. ವಿದ್ವಾನ್ ಪ್ರಕಾಶನ- ಹಿಂದಕಿತಾಬ್ಸ-ಲಿಮಿಟೆಡ್ 158/1 ಐದನೇ ಕ್ರಾಸ್, ನಾಲ್ಕನೆಯ ಮೆಯಿನ್ ರಸ್ತೆ. ಚಾಮರಾಜಪೇಟೆ ಬೆಂಗಳೂರು ಸಿಟಿ. ಬೆಲೆ ರೂ. ೨—೦—೦

**೪. ಸೀಳ್ನುಡಿ**

ಲೇಖಕರು- ಜ. ಪ. ಚೆನ್ನಬಸವರಾಜ ದೇಶಿಕೇಂದ್ರ ಮಹಾಸ್ವಾಮಿಗಳವರು. ಪ್ರಕಾಶನ- ಪ್ರಬೋಧ ಪುಸ್ತಕ ಮಾಲೆ ಬೆಂಗಳೂರು.

**೫. ಉಷಾ [ ದಸರಾ ಸಂಚಿಕೆ ]**

ಪ್ರಕಾಶಕರು- ಉಷಾ ಪ್ರೆಸ್ ಅಳಿಚಿಕ್ಕಪೇಟೆ ಬೆಂಗಳೂರು ಸಿಟಿ.

**ದೇವಗಾನ**

ಸಂಜೀವನ ಪ್ರಕಾಶನ್ ಹುಬ್ಬಳ್ಳಿ

**So Many Hungers**

By. Bhabhani Bhattacharya
Published By Hind titals. Ltd.
Hornby Road, Bombay.
Pages 290. Price 7-8-0

# ರಾ. ಶ್ರೀ. ಹುಕ್ಕೇರಿಕರರು

ಲೇ-ಶ್ರೀ ರಾ. ಸಾವಕಾರ, ಅ. ಭಾ. ಹ. ಸಂಘ.

(ವಿಶೇಷ ಸಂಚಿಕೆಗಾಗಿ ಬಂದುದು)

ನನಗೆ ಶ್ರೀ ಹುಕ್ಕೇರಿಕರರ ಪರಿಚಯವಾದುದು ಮೊಟ್ಟಮೊದಲು ಇಸವಿಸನ್ ೧೯೦೪ರಲ್ಲಿ ಅಗ್ಗ ನನಗೆ ಧಾರವಾಡದ ವ್ಹಿಕ್ಟೋರಿಯಾ ಹಾಯಸ್ಕೂಲಿನಲ್ಲಿ ಅವರೊಂದಿಗೆ ಕೆಲಸ ಮಾಡುವ ಸುಯೋಗವುಲಭಿಸಿತು. ಎರಡು ವರ್ಷ ನಾನು ಅವರೊಂದಿಗೆ ಕೆಲಸಮಾಡಿದೆನು. ನಮ್ಮ ಹಾಗೂ ಅವರ ಸಂಬಂಧವು ಕೇವಲ ಶಿಕ್ಷಕ ಹಾಗೂ ಪ್ರಿನ್ಸಿಪಾಲ ಇವರಲ್ಲಿರುವ ಮಟ್ಟಿಗೆ ಮಾತ್ರ ಇರದೆ ತೀರಸಲಿಗೆಯ, ಸ್ನೇಹಪೂರ್ಣವೂ ಇದ್ದಿತು. ಅವರ ವಿಚಾರಗಳಲ್ಲಿ ಒಂದು ಬಗೆಯ ಕ್ರಾಂತಿ ಹಾಗೂ ಸ್ವಾವಲಂಬನೆಯಿರುತ್ತಿದ್ದವು. ಅಂತೆಯೆ ಅವರು ಎಮ್. ಎ. ಪರೀಕ್ಷೆಯಲ್ಲಿ ತೇರ್ಗಡೆಹೊಂದಿದೊಡನೆ ತಮ್ಮ ಸಮಕಾಲೀನ ಸುಶಿಕ್ಷಿತರಂತೆ ಯಾವುದೊಂದು ಹಾಯಸ್ಕೂಲಿನಲ್ಲಿ ಶಿಕ್ಷಕರಾಗಬಯಸದೆ ಧಾರವಾಡದಲ್ಲಿಯ ವ್ಹಿಕ್ಟೋರಿಯಾ ಹಾಯಸ್ಕೂಲಿನ ಆಡಳಿತವನ್ನು ಕೈಕೊಂಡು ಅದನ್ನು ಹೆಚ್ಚು ಬೆಳಕಿಗೆ ತರುವ ಸಾಹಸಕ್ಕೆ ಕೈಹಾಕಿದರು. ಕರ್ನಾಟಕದಲ್ಲಿ ಈ ರೀತಿ ಒಂದು ಹಾಯಸ್ಕೂಲಿನ ಹೊಣೆ ಹೊತ್ತು ಅದನ್ನು ಊರ್ಜಿತಗೊಳಿಸಲು ಟೊಂಕಕಟ್ಟಿ ಮುಂದೆ ಬಂದ ಮೊದಲನೆಯ ಪದವೀಧರರೆಂದರೆ ನನಗೆ ಗೊತ್ತಿದ ಮಟ್ಟಿಗೆ ಶ್ರೀ. ಹುಕ್ಕೇರಿಕರರೇ. ಅದಕ್ಕಾಗಿಯೆ ಇವರ ಈ ಕಾರ್ಯಕ್ಕೆ ನಾನು ಸಾಹಸವೆಂದುದು. ಈ ಸಂದರ್ಭದಲ್ಲಿ ಅವರ ಕಾರ್ಯಕ್ಕೆ ತತ್ಪರತೆಯಿಂದ ನೆರವಾಗಲು ಮುಂದೆ ಬಂದ ಶ್ರೀ ರಂಗನಾಥಾಚಾರ್ಯ ಗುತ್ತಲ, ವಾಯ್. ಬಿ. ಧಾರವಾಡಕರ, ಆರ್. ಎಚ್. ಕುಲಕರ್ಣಿ ಎಂಬ ಪದವೀಧರ ಮಿತ್ರರನ್ನು ನಾನು ಮರೆಯಲಾರೆನು. ಅವರೆಲ್ಲರು ಸ್ವರ್ಗಸ್ಥರಾಗಿ ಹೋಗಿರುವರು. ಆದರೂ ಈ ನಾಲ್ವರು ಪದವೀಧರರು ಕರ್ನಾಟಕದ ಶಿಕ್ಷಣ ಪ್ರಪಂಚದಲ್ಲಿ ಸಾರ್ವಜನಿಕ ಪ್ರಯತ್ನಗಳ ಪುರಸ್ಕರ್ತರೆನ್ನಬಹುದು.

ಶ್ರೀ ಹುಕ್ಕೇರಿಕರರು ತೀರ ಸ್ಪಷ್ಟ ಮಾತಾಡುವ ಸ್ವಭಾವದವರು. ಸತತ ಉದ್ಯೋಗಿಗಳು. ತಮ್ಮಂತೆಯೆ ತಮ್ಮ ಸಹಶಿಕ್ಷಕರು ಹಾಗೂ ವಿದ್ಯಾರ್ಥಿಗಳು ಉದ್ಯಮಶೀಲರಾಗಬೇಕೆಂದು ಅವರ ಹಂಬಲವಿರುತ್ತಿದ್ದಿತು. ಒಂದು ದಿನ ನನ್ನನ್ನು ಕರೆದು— 'ಸಾವಕಾರ ಮಾಸ್ತರರೇ ನೀವು ಈವರ್ಷ ಎಸ್. ಟಿ. ಸಿ. ಪರೀಕ್ಷೆಗೆ ಕುಳಿತು ಪಾಸಾಗಿ ಬಿಡಿರಿ. ನೀವು ಶಾಲಾ ಖಾತೆಯಲ್ಲಿಯೆ ಕೆಲಸಮಾಡಲು ಇಚ್ಛಿಸುತ್ತಿರುವದರಿಂದ ಅದನ್ನು ಪಾಸಾದರೆ ಒಳಿತು' ಎಂದು ಹೇಳಿದರು. 'ಪರೀಕ್ಷೆ ಮೂರೇ ತಿಂಗಳು-ಉಳಿದಿವೆ. ಹೇಗಾಗಬೇಕು ? ಎಂದು ನಾನು ಕೇಳಲು 'ಚಿಂತೆ—ಬೇಡ' ನಾನು ಸಹಾಯ ಮಾಡುವೆ' ಎಂದು ಹೇಳಿ ತಾವು ಮೊದಲೇ ತಯಾರಿಸಿದ್ದ ನೋಟುಪುಸ್ತಕವನ್ನು ಕೊಟ್ಟರು. ಹಾಗೂ ಕಾಲಕಾಲಕ್ಕೆ ಎಲ್ಲ ದಿಶೆಯಿಂದ ನೆರವಾದರು. ಮುಂದೆ ಅವರು ನಿರೀಕ್ಷಿಸಿದಂತೆ ಪರೀಕ್ಷೆಯ ಫಲಿತಾಂಶವು ನೆಟ್ಟಗಾಯಿತು. ತಮ್ಮ ಸಹಕಾರ್ಯಕರ್ತರು ಹಿಂದುಳಿಯಬಾರದೆಂದು ಅವರು ಈ ರೀತಿ ಅನೇಕ ಬಗೆಯಾಗಿ ಪ್ರಯತ್ನಿಸುತ್ತಿದ್ದರು. ಅವರ ಹಾಗೂ ಅವರ ಸಂಗತಿಗರ ಪ್ರಯತ್ನಗಳ ಬಲದಿಂದ ವಿಕ್ಟೋರಿಯಾ ಹಾಯಸ್ಕೂಲು ಎರಡು ವರ್ಷಗಳಲ್ಲಿಯೆ ಊರ್ಜಿತಾವಸ್ಥೆಗೆ ಬಂದ. ಮುಂದೆ ಅದಕ್ಕೆ ಕಾಲೇಜದ ಮೊದಲನೆಯ ಎರಡು ವರ್ಗಗಳೂ ಜೋಡಿಸಲ್ಪಟ್ಟವು. ಆದರೆ ೧೯೩೦—೩೧ ರಲ್ಲಿಯ ರಾಜಕೀಯ ಆಂದೋಲನದ ಪರಿಣಾಮವಾಗಿ ಆ ಕಾರ್ಯವು ಇವರ ಕೈಬಿಟ್ಟಿತು.

ಶ್ರೀ. ರಾ. ಶ್ರೀ. ಯವರು ರಾಜಕಾರಣದಲ್ಲಿ ಸೇರಿದರು. ಅಲ್ಲಿಯಾದರೂ ಅವರು ಹಿಂಜರಿಯದೆ ಬಂದ ಎಡರುಗಳನ್ನೆದುರಿಸುತ್ತ ತಮ್ಮಲ್ಲಿಯ ಸಂಘಟನಾಶಕ್ತಿ, ಉದ್ಯಮ ಶೀಲತೆ ಮುಂತಾದ ಗುಣಗಳನ್ನು ಕರ್ನಾಟಕದ ಜನತೆಗೆ ತೋರಿಸುತ್ತ ಬಂದಿರುವರು. ಮೊದಲು ಅವರಿಗೆ ಕನ್ನಡ ಭಾಷೆಯಲ್ಲಿ ಮಾತಾಡಲು ಬರುತ್ತಿದ್ದಿಲ್ಲ. ಈಗ ಅವರಂತೆ ಕನ್ನಡದಲ್ಲಿ ಮಾತಾಡುವವರ ಸಂಖ್ಯೆ ತೀರ ಕಡಿಮೆ. ಶ್ರೀ. ರಾ. ಶ್ರೀ. ಯವರ ಇನ್ನೊಂದು ಗುಣವೆಂದರೆ ಅವರು ಚೆನ್ನಾಗಿ ಅಭ್ಯಾಸ ಮಾಡದೆ ಯಾವುದೊಂದು ವಿಷಯದ ಬಗ್ಗೆ ಮಾತಾಡುತ್ತಿರುವದಿಲ್ಲ. ಅವರಲ್ಲಿ ವಕ್ತೃತ್ವ ನಿಶ್ಚಿದ್ದರೂ, ಜನತೆಗೆ ಉಪಯುಕ್ತವಾಗುವ ಸಂಗತಿ ಹಾಗೂ ಅಂಕೆ ಸಂಖ್ಯೆಗಳು ಅವರ ಭಾಷಣದಲ್ಲಿ ಯಾವಾಗಲೂ ಸಾಕಷ್ಟಿರುವವು. ಅಂತೂ ಕರ್ನಾಟಕದಲ್ಲಿಯ ಪ್ರಥಮ ಶ್ರೇಣಿಯ ಕಾರ್ಯಕರ್ತರಲ್ಲಿ ಇವರೊಬ್ಬರು. ಇವರು ತಮ್ಮ ಆಯುಷ್ಯದ ೬೦ ವರ್ಷಗಳ ಒಂದು ಸುತ್ತನ್ನು ಸುತ್ತಿ ಹೊಸ ಮೆಟ್ಟಲನ್ನು ಈಗ ಏರುತ್ತಿರುವರು. ಪರಮಾತ್ಮನು ಶ್ರೀ ರಾ. ಶ್ರೀ. ಯವರಿಗೆ ಆಯುರಾರೋಗ್ಯವನ್ನು ದಯಪಾಲಿಸಲೆಂದು ಪ್ರಾರ್ಥಿಸಿ ಅವರಿಗೆ 'ಕರ್ನಾಟಕದ - ಜನಸೇವೆಯನ್ನೇ ಗುರಿಯಾಗಿಟ್ಟುಕೊಂಡು ಮುಂದೆ ಸಾಗಿರಿ' ಎಂದು ನಮ್ರತೆಯಿಂದ ವಿಜ್ಞಪಿಸಿ ವಿರಮಿಸುವೆನು.

Reg. No. B. 3148

LICENCE No. 3
Licenced to Post without Prepayment

KARMVEER 17-11-47




ಜ್ಯೋತಿಷಿ:— ಕೃಷ್ಣಶಾಸ್ತ್ರಿ ಭಟ, ಭವಿಷ್ಯ ಕಥನ ಆಫೀಸ ಖಡೇಬಜಾರ ಬೆಳಗಾವಿ

# ನವಂಬರ ೧೭ ರಿಂದ ೨೩ರ ವರೆಗೆ

### ಮೇಷ

ನಿಮ್ಮ ಪ್ರಕೃತಿ ಅನುಕೂಲ ಆದರೆ ಹೆಂಡತಿಯ ಪ್ರಕೃತಿಯಲ್ಲಿ ಕುರಕುರಿ. ಪ್ರಾಪಂಚಿಕ ಸುಖ ಬಹಳ ಉತ್ತಮ ಮತ್ತು ಮಕ್ಕಳಿಂದ ಬಹಳ ಉತ್ತಮ ಸಂಗತಿಗಳು ಸಂಭವಿಸಿದ ರಿಂದ ಮನಸ್ಸು ಉತ್ಸಾಹಿತ. ಉದ್ಯೋಗದಲ್ಲಿ ಪ್ರಗತಿ ಸಾಧಾರಣವೆ ಆದರೆ ಪ್ರತಿಷ್ಠೆ ಮತ್ತು ಲಾಭ ಉತ್ತಮ. ಅವಚಿತ ಲಾಭದ ಸಂಭವ. ಮಿತ್ರರಿಂದ ಇಚ್ಛಿತ ಕಾರ್ಯಕ್ಕೆ ಪ್ರೋತ್ಸಾಹನ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳ ಸಮಾನ ಸ್ಥಿತಿ. ಸ್ವಪ್ನಗಳು ಶುಭ ಮತ್ತು ಭಾವೀ ಸೂಚಕ ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಹೆಚ್ಚು ಅನುಕೂಲ. ಅಶ್ವಿನಿಯ ಕೊನೆಯ ೨ ಮತ್ತು ಭರಣಿಯ ಮೊದಲನೆ ೨ ಚರಣಗಳಿಗೆ ಹೆಚ್ಚು ಅನುಕೂಲ.

ಅದರಂತೆ ಕಳೆದ ೧॥ ವರ್ಷಗಳಿಂದ ಈ ರಾಶಿಯವರಿಗೆ ಇದ್ದ ೨ ನೇ ರಾಹು ೧೮ ನೇ ತಾ. ಮಂಗಳವಾರ ಮುಂಜಾನೆ ೧೦॥ ಗಂಟೆಗೆ ೧ ನೇ ಸ್ಥಾನಕ್ಕೆ ಬರುವನು. ಅಂದರೆ ವೃಷಭದಿಂದ ಮೇಷ ರಾಶಿಗೆ ಬರುವನು ಮತ್ತು ಮುಂದೆ ೧॥ ವರ್ಷ ಅದೇ ಸ್ಥಾನದಲ್ಲಿ ಇರುವನು. ಇದರಿಂದ ಈ ರಾಶಿಯವರಿಗೆ ಸ್ವಭಾವದಲ್ಲಿ ಧೈರ್ಯ, ಕ್ರೋಧ ಮತ್ತು ಕರ್ತೃತ್ವ ಶಕ್ತಿಯ ಬೆಳವಣಿಗೆ ಪರಸ್ತ್ರೀಯ ಅಭಿಲಾಷ ದುಷ್ಟವಾಸನೆಗಳ ಹೆಚ್ಚಳ. ಪ್ರಕೃತಿ ಉತ್ತಮ. ಆದರೆ ಸಣ್ಣ ದೊಡ್ಡ ಅಪಘಾತಗಳ ಅಂಜಿಕೆ ಮುಂತಾದ ಫಲಗಳು ಸಿಕ್ಕುವವು.

### ವೃಷಭ

ಪ್ರಕೃತಿ ಮತ್ತು ಸ್ತ್ರೀ ಸುಖ ಉತ್ತಮ. ಆದರೆ ಉಳಿದ ಪ್ರಾಪಂಚಿಕ ತೊಂದರೆ ದಿನವೂ. ವ್ಯವಹಾರದಲ್ಲಿ ಗೊಂದಲವೇಳುವದು ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭವೂ ಅತಿ ಉತ್ತಮ. ಆದರೆ ವಿಪರೀತ ಸಂಗತಿಗಾಗಿ ವೆಚ್ಚ ಮಾಡುವ ಹುಕಿ. ಮಿತ್ರ ಸುಖ ಉತ್ತಮವಿದ್ದಷ್ಟು ಶತ್ರುಗಳಿಂದ ಅಷ್ಟು ತೊಂದರೆ. ಎಲ್ಲಿಯಾದರೂ ಎದ್ದು ಓಡಿ ಹೋಗಬೇಕೆಂದು ಎನಿಸುತ್ತದೆ. ಜನರಿಂದ ಅವಜ್ಞೆ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಸಮಾನ ಸ್ಥಿತಿ. ಪತ್ರವ್ಯವಹಾರಕ್ಕಿಂತ ಪ್ರವಾಸ ಮತ್ತು ಭೆಟ್ಟಿ ಅನುಕೂಲ. ಕೃತಿಕೆಯ ಕೊನೆಯ ೨ ಮತ್ತು ರೋಹಿಣಿಯ ಮೊದಲನೆ ೨ ಚರಣಗಳಿಗೆ ತೊಂದರೆ ಕಡಮೆ. ತಾ ೧೮, ೧೯, ೨೪ ಅನುಕೂಲ.

ತಾ. ೧೮ ಕ್ಕೆ ಬರುವ ೧೨ ರಾಹು ಮಿತವ್ಯಯ, ಪಾರಮಾರ್ಥಿಕ ಪ್ರೇಮ, ಶತ್ರುಗಳಿಂದ ಬಹಳ ತೊಂದರೆ. ಕೊನೆಯಲ್ಲಿ ವಿಜಯ ಮಕ್ಕಳಿಗೆ ಕ್ಲೇಶ, ಮೊದಲಾದ ಫಲಗಳನ್ನು ಕೊಡುವನು.

### ಮಿಥುನ

ಪ್ರಕೃತಿ ಉತ್ತಮ ಆದರೆ ಪ್ರಾಪಂಚಿಕ ತೊಂದರೆ ವಿಪರೀತ. ಕ್ಷುಲ್ಲಕ ಮಾತಿಗಾಗಿಯೂ ಹೆಂಡತಿ ಮತ್ತು ಮಕ್ಕಳಿಂದ ವಿರೋಧ. ಉದ್ಯೋಗದಲ್ಲಿ ಪ್ರಗತಿ ಸಾಧಾರಣವೆ. ಆದರೆ ಪ್ರತಿಷ್ಠೆ ಮತ್ತು ಲಾಭ ಉತ್ತಮ. ಮಿತ್ರ ಸುಖ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಹಿಮ್ಮೆಟ್ಟುವದು. ಪ್ರವಾಸ ಮತ್ತು ಭೆಟ್ಟಿಗಿಂತ ಪತ್ರವ್ಯವಹಾರ ಅನುಕೂಲ. ಆರಿದ್ರೆಯ ಕೊನೆಯ ೨ ಮತ್ತು ಪುನರ್ವಸುವಿನ ಮೊದಲನೆ ೨ ಚರಣಗಳಿಗೆ ತೊಂದರೆ ಕಡಮೆ. ತಾ. ೧೭, ೨೨, ೨೪ ಅನುಕೂಲ.

೧೮ ನೇ ತಾರೀಕಿಗೆ ಬರುವ ೧೧ ನೇ ರಾಹು ದ್ರವ್ಯಲಾಭ ತುಂಬ ಮಿತ್ರ ಸುಖ ಉತ್ತಮ ಶತ್ರುಗಳ ನಾಶ, ಸ್ತ್ರೀ ವಿಷಯಕ್ಕೆ ಅಪ್ರೀತಿ ಮೊದಲಾದ ಫಲಗಳನ್ನು ಕೊಡುವನು.

### ಕರ್ಕ

ಪ್ರಕೃತಿ ಸಾಧಾರಣವೆ ಆದರೆ ಹೆಂಡತಿಯ ಸುಖ ಉತ್ತಮ. ಕೌಟುಂಬಿಕ ಉತ್ಕರ್ಷೆಯ ಸಂಗತಿಗಳು. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ [illegible] ಆಗುವ ವರೆಗೆ ತೊಂದರೆ. ಆದರೆ ಕೊನೆಯಲ್ಲಿ ಮಾತ್ರ ಮನಸ್ಸಿನಂತೆ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಅನುಕೂಲತೆ ಭೆಟ್ಟಿಗಿಂತ ಪ್ರವಾಸ ಮತ್ತು ಪತ್ರ ವ್ಯವಹಾರ ಅನುಕೂಲ. ಪುಷ್ಯದ ಕೊನೆಯ ಮತ್ತು ಆಶ್ಲೇಷಾದ ಮೊದಲನೆ ೨ ನೇ ಚರಣಗಳಿಗೆ ತೊಂದರೆಯಿಂದಲೆ ಯಶಸ್ಸು. ತಾ. ೧೮. ೧೯, ೨೪ ಅನುಕೂಲ.

ತಾ. ೧೮ ಕ್ಕೆ ಬರುವ ೧೦ ನೇ ರಾಹು ಅಧಿಕಾರ. ಸತ್ತೆ, ಲೌಕಿಕ ಪ್ರಭುತ್ವ ಇವುಗಳಿಗೆ ಉತ್ತಮ. ಆದರೆ ಪಿತೃಕ್ಲೇಶ, ಸ್ಥಾವರ ನಾಶವನ್ನೂ ಮಾಡಬಲ್ಲನು.

### ಸಿಂಹ

ನಿಮ್ಮ ಪ್ರಕೃತಿ ಅನುಕೂಲ ಆದರೆ ಹೆಂಡತಿಯ ಪ್ರಕೃತಿ ಕೆಡುವದು ಮಕ್ಕಳು ವ್ಯಾಪವನ್ನು ಬೆಳೆಸುವಂಥ ವಿಪರೀತ ರೀತಿಯನ್ನು ಇಡುವರು. ಅಪರಿಚಿತ ಅತಿಥಿಗಳಿಂದ ಬಹಳಉಪದ್ರವಮತ್ತು ವಿಪರೀತ ಅಪಮಾನ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಬಹಳ ಉತ್ತಮ. ಆದರೆ ಮನಸ್ಸಿನ ವಿರುದ್ಧ ವೆಚ್ಚ ಮಾಡುವ ಅಪರಿಹಾರ್ಯ ಪ್ರಸಂಗ. ಮಿತ್ರಸುಖ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆಯ ಲ್ಲಿಹಿಮ್ಮೆಟ್ಟುವದು. ಪ್ರವಾಸಾದಿ ಕೆಲಸ ಹಿತದ್ದು ಮಘಾದ ಕೊನೆಯ ೨ ಮತ್ತು ಪೂರ್ವಾದ ಮೊದಲನೆ ೨ ಚರಣಗಳಿಗೆ ತೊಂದರೆ ಕಡಮೆ. ೧೭, ೨೧, ೨೨ ಅನುಕೂಲ.

ತಾ ೧೮ಕ್ಕೆ ಬರುವ ೯ ನೇ ರಾಹು ಸ್ವಲ್ಪ ಧರ್ಮ ಹಾನಿ ಮತ್ತು ಅವಕೀರ್ತಿಯನ್ನುಂಟು ಮಾಡುವನು. ಆದರೆ ಯಶಸ್ಸು ಮತ್ತು ಲಾಭಕ್ಕೆ ಉತ್ತಮವೆನಿಸುವನು.

### ಕನ್ಯಾ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಉತ್ತಮ ಆದರೆ ಕೆಲ ವಿಷಯಗಳಲ್ಲಿ ನಿರರ್ಥಕ ದಗದಗಿ ಉತ್ಪನ್ನವಾಗುವ ಅರಿಜಿಕೆ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಉತ್ತಮ. ಆದರೆ ನಿರರ್ಥಕ ವೆಚ್ಚ ಬಹಳ ಮತ್ತು ಎಷ್ಟೋ ಜನರೊಡನೆ ಕ್ಷುಲ್ಲಕ ಕಾರಣಗಳಿಗಾಗಿ ಬಾಯಿಗೆ ಬಾಯಿ ಹತ್ತುವ ಪ್ರಸಂಗ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ತೊಂದರೆ ಮತ್ತು ವೆಚ್ಚ ಬಹಳ. ಆದರೆ ಕೊನೆಗೆ ಅನುಕೂಲತೆ. ಪ್ರವಾಸಾದಿ ಕೆಲಸ ಮನಸ್ಸಿನಂತೆ. ಉತ್ತರಾದ ಕೊನೆಯ ೨ ಮತ್ತು ಹಸ್ತಾದ ಮೊದಲನೆ ೨ ಚರಣಗಳಿಗೆ ತೊಂದರೆ ಕಡಮೆ. ತಾ. ೧೮, ೧೯, ೨೪ ಅನುಕೂಲ.

೧೮ ನೇ ತಾರೀಕಿಗೆ ಬರುವ ೮ ನೇ ರಾಹು ಪ್ರಕೃತಿಗೆ ಕ್ಲೇಶ. ಕೆಲ ವಿಷಯಗಳಲ್ಲಿ ಮನಸ್ಸಿನ ವಿರುದ್ಧ ವರ್ತಿಸುವ ಪ್ರಸಂಗ. ಆದರೆ ಅಲ್ಪ ಸ್ವಲ್ಪ ಅವಚಿತ ಧನ ಲಾಭ ಮೊದಲಾದ ಫಲಗಳನ್ನು ಕೊಡುವನು.

### ತುಲಾ

ಪ್ರಕೃತಿ ಅನುಕೂಲ. ಆದರೆ ಹೆಂಡತಿ ಮತ್ತು ಪ್ರಾಪಂಚಿಕ ಸುಖ ಉತ್ತಮ. ಸ್ಥಾವರದಲ್ಲಿ ಹೊಸ ಹೆಚ್ಚಳ. ಉದ್ಯೋಗದಲ್ಲಿ ಉತ್ತಮ ಪ್ರಗತಿ ಭಾರಿ ಪ್ರತಿಷ್ಠೆ ಮತ್ತು ತುಂಬ ಲಾಭ ಮಿತ್ರರಿಂದ ವಿಶೇಷ ಆದರದ ಕೃತ್ಯಗಳು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಯಶಸ್ಸು. ಪ್ರವಾಸಾದಿ ಕೆಲಸಗಳೂ ಅಂದಾಜಿಗಿಂತ ಹೆಚ್ಚು ಅನುಕೂಲ. ಆದರೆ ಸ್ವಾತಿಯ ಕೊನೆಯ ೨ ಮತ್ತು ವಿಶಾಖಾದ ಮೊದಲನೆ ೨ ಚರಣಗಳಿಗೆ ತೊಂದರೆಯಿಂದಲೆ ಯಶಸ್ಸು. ತಾ. ೧೭, ೨೧, ೨೨ ಅನುಕೂಲ.

೧೮ ಕ್ಕೆ ಬರುವ ೭ ನೇ ರಾಹು ಸ್ತ್ರೀಕ್ಲೇಶ ಮಾನಹಾನಿ ಮತ್ತು ದುರ್ಬುದ್ಧಿ ಕರ್ತನಿದ್ದರೂ ಲಾಭಕ್ಕೆ ಮತ್ತು ಮಕ್ಕಳ ಉತ್ಕರ್ಷಕ್ಕೆ ಉತ್ತಮನಿರುವನು.

ಈ ಪತ್ರಿಕೆಯು ಹುಬ್ಬಳ್ಳಿ ಸಂಯುಕ್ತ-ಕರ್ನಾಟಕ ಮುದ್ರಣಾಲಯದಲ್ಲಿ 'ಲೋಕಶಿಕ್ಷಣ ಟ್ರಸ್ಟ' ದ ಪರವಾಗಿ ಹ. ರಾ. ಮೋಹರೆಯವರಿಂದ ಮುದ್ರಿತವಾಗಿ ಪ್ರಕಟವಾಯಿತು.

### ವೃಶ್ಚಿಕ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಬಹಳ ಉತ್ತಮ. ಹೆಂಡತಿ ಮತ್ತು ಮಕ್ಕಳಿಂದ ಪ್ರತಿಯೊಂದು ಮಾತು ಮನಸ್ಸಿನಂತೆ ಆಗುತ್ತ ನಡೆಯುವ ಯೋಗ. ಉದ್ಯೋಗದಲ್ಲಿ ಒಳ್ಳೆ ಪ್ರಗತಿ ಬಹಳ ಪ್ರತಿಷ್ಠೆ ಮತ್ತು ತುಂಬ ಲಾಭ. ಆದರೆ ವೆಚ್ಚವೂ ಇಮ್ಮಡಿಯಾಗುವದು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಳ್ಳೆ ಯಶಸ್ಸು. ಪ್ರವಾಸಾದಿ ಕೆಲಸಗಳು ಅತಿ ಹಿತದ್ದು. ಆದರೆ ಅನುರಾಧೆಯ ಕೊನೆಯ ೨ ಮತ್ತು ಜೇಷ್ಠ್ಯಾದ ಮೊದಲನೆ ೨ ಚರಣಗಳಿಗೆ ತೊಂದರೆಯಿಂದಲೆ ಯಶಸ್ಸು. ತಾ. ೧೭, ೧೮, ೧೯, ೨೪ ಅನುಕೂಲ.

ತಾ. ೧೮ ಕ್ಕೆ ಬರುವ ೬ ನೇ ರಾಹು ಉತ್ಕರ್ಷ ಶ್ರೇಷ್ಠತ್ವ ಮತ್ತು ಲಾಭದಾಯಕನಿದ್ದು ಶತ್ರು ಮತ್ತು ಸಂಕಟಗಳನ್ನು ನಾಶ ಮಾಡುವನು.

### ಧನು

ಪ್ರಕೃತಿಗೆ ಅಸ್ವಸ್ಥತೆ. ಪ್ರಾಪಂಚಿಕ ತೊಂದರೆ ಹೆಚ್ಚು. ಹೆಂಡತಿಗೂಡ ವಿರೋಧ. ಆದರೆ ಮಕ್ಕಳ ಉನ್ನತಿ ಸ್ವಲ್ಪ. ಉದ್ಯೋಗದಲ್ಲಿ ಪ್ರತಿಷ್ಠೆ ಅನುಕೂಲ. ಆದರೆ ಪ್ರಗತಿ ಮತ್ತು ಲಾಭ ಬಹಳ ಕಡಮೆ. ಅಲ್ಲದೆ ಭಾರದ ವೆಚ್ಚ. ಅಶುಭ ವಾರ್ತೆಗಳಿಂದ ಮನಸ್ಸು ಗಾಬರಿಗೊಳ್ಳುವದು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಸಮಾನ ಸ್ಥಿತಿ. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಅನುಕೂಲ. ಆದರೆ ಮೂಲಾದ ಕೊನೆಯ ೨ ಮತ್ತು ಪೂರ್ವಾಷಾಢಾದ ಮೊದಲನೆ ೨ ಚರಣಗಳಿಗೆ ತೊಂದರೆ ಕಡಮೆ. ತಾ. ೨೦, ೨೧, ೨೨ ಅನುಕೂಲ.

೧೮ ಕ್ಕೆ ಬರುವ ೫ ನೇ ರಾಹು ವಿದ್ಯೆಯಲ್ಲಿ ವಿಘ್ನ ವಿಪರೀತ ಬುದ್ಧಿ, ಎಂಥ ಕೆಲಸದಲ್ಲಿಯೂ ಅಪೂರ್ಣತೆ, ಮಕ್ಕಳಿಗೆ ಕ್ಲೇಶ ಮಾನಸಿಕ ವಾಗ್ಯುದ್ಧ ಮತ್ತು ಭಾಗ್ಯಕ್ಕೆ ಮೇಲಿಂದ ವಿರೀತಗಳನ್ನುಂಟು ಮಾಡುವ ಫಲಗಳನ್ನು ಕೊಡುವನು.

### ಮಕರ

ಪ್ರಕೃತಿಗೆ ಕ್ಲೇಶ, ಕುಟುಂಬ ಸುಖ ಸಾಧಾರಣ. ಆದರೆ ಮಕ್ಕಳಿಗೆ ಒಳ್ಳೆ ಉನ್ನತಿ, ಆಪ್ತರು ಮತ್ತು ನೆರೆಯವರಿಂದ ನಿರರ್ಥಕ ತೊಂದರೆ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಅತಿ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಅನುಕೂಲತೆ, ಸ್ಥಾವರದ ಸಂಬಂಧದಲ್ಲಿ ಸ್ವಲ್ಪ ಅನುಕೂಲ ಸಂಗತಿಗಳು. ಪ್ರವಾಸಾದಿ ಕೆಲಸಗಳು ಹಿತದ್ದು. ಉತ್ತರಾಷಾಢದ ಕೊನೆಯ ಮತ್ತು ಶ್ರವಣಾದ ಮೊದಲನೆ ೨ ಚರಣಗಳಿಗೆ ತೊಂದರೆ ಕಡಮೆ. ತಾ. ೧೮, ೧೯, ೨೦, ೨೪ ಅನುಕೂಲ.

ತಾ. ೧೮ ಕ್ಕೆ ಬರುವ ೪ ನೇ ರಾಹು ಮಾತೃಕ್ಲೇಶ, ಸ್ಥಾವರ ನಾಶ, ಗ್ರಾಮಿಕ ವಿರೋಧ ಆಪ್ತದ್ವೇಷ ಮತ್ತು ಸ್ಥಲಾಂತರ ಈ ಫಲಗಳನ್ನು ಕೊಡುವನು.

### ಕುಂಭ

ಪ್ರಕೃತಿ ಸಾಧಾರಣವೆ. ಹೆಂಡತಿಗೂ ಅಲ್ಪ ಸ್ವಲ್ಪ ಕ್ಲೇಶ. ಮಕ್ಕಳ ಉನ್ನತಿ ಮತ್ತು ಪ್ರಾಪಂಚಿಕ ಸುಖ. ಉಳಿದ ವಿಷಯಗಳಲ್ಲಿ ಬಹಳ ಉತ್ತಮ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಬಹಳ ಜೋರಾದದ್ದು. ಸ್ಥಾವರದಲ್ಲಿ ಹೊಸ ಹೆಚ್ಚಳ. ಅಕಲ್ಪಿತ ದೂರದ ಮತ್ತು ಸುಖದ ಪ್ರವಾಸ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಅನುಕೂಲತೆ. ಭೆಟ್ಟಿ ಮತ್ತು ಪತ್ರವ್ಯವಹಾರ ಉತ್ತಮ, ಶತತಾರಿಕೆಯ ಕೊನೆಯ ೨ ಮತ್ತು ಪೂರ್ವಾಭಾದ್ರಪದದ ಮೊದಲನೆ ೨ ಚರಣಗಳಿಗೆ ಹೆಚ್ಚು ತೊಂದರೆ. ತಾ. ೧೭, ೨೧, ೨೨, ೨೪ ಅನುಕೂಲ.

ತಾ. ೧೮ ಕ್ಕೆ ಬರುವ ೩ ನೇ ರಾಹು ಸಾಹಸದ ಕಾರ್ಯಗಳಲ್ಲಿ ಯಶಸ್ಸು, ದ್ರವ್ಯ ಲಾಭ ತುಂಬ, ಬಂಧುಬಳಗದವರಲ್ಲಿ ವಿರೋಧ, ಗರ್ವದ ಹೆಚ್ಚಳ ಮೊದಲಾದ ಫಲಗಳನ್ನು ಕೊಡುವನು.

### ಮೀನ

ಪ್ರಕೃತಿ ಉತ್ತಮ. ಆದರೆ ಹೆಂಡತಿಯ ಸ್ವಲ್ಪ ವಿರೋಧ. ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಅನುಕೂಲ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಬಹಳ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಳ್ಳೆ ಯಶಸ್ಸು. ಮಿತ್ರ ಸುಖ ಉತ್ತಮ. ಪತ್ರವ್ಯವಹಾರಕ್ಕಿಂತ ಪ್ರವಾಸ ಮತ್ತು ಭೆಟ್ಟಿ ಉತ್ತಮ. ಉತ್ತರಾಭಾದ್ರಪದದ ಕೊನೆಯ ೨ ಮತ್ತು ರೇವತಿಯ ಮೊದಲನೆಯ ೨ ಚರಣಗಳಿಗೆ ಮಾತ್ರ ತೊಂದರೆಯಿಂದಲೆ ಯಶಸ್ಸು. ತಾ. ೧೮, ೧೯, ೨೦, ೨೪ ಅನುಕೂಲ.

ತಾ. ೧೮ ಕ್ಕೆ ಬರುವ ೨ ನೇ ರಾಹು ಸಂಗ್ರಹ ಹಾನಿ, ಮಾನಸಿಕ ತೊಂದರೆ ಗೃಹಕಲಹ ನೇತ್ರ ಮತ್ತು ಮಸ್ತಕ ಪೀಡೆ ಮೊದಲಾದ ಫಲಗಳನ್ನು ಕೊಡುವನು.

## ರಂಗೂನಿನಲ್ಲಿ ಮಕ್ಕಳ ಕಳವು

ಬರ್ಮಾ ರೈಫಲ್ಸಿನವರು ದೇಶದಲ್ಲಿ ಹಾವಳಿ ಮಾಡುತ್ತಿರುವ ಪುಂಡರ ತಂಡವನ್ನು ಸದೆ ಬಡಿಯಲು ಸುಸಜ್ಜಿತರಾಗಿ ಹೊರ ಬೀಳುವರೆಂದು ಸರಕಾರೀ ಸುದ್ದಿಯಿದೆ. ಕಳೆದ ಕೆಲ ದಿನಗಳಿಂದ ನಗರದಲ್ಲಿಯ ಮಕ್ಕಳನ್ನು ಹಿಡಿದುಕೊಂಡು ಹೋಗುತ್ತಿರುವ ಪುಂಡರ ತಂಡದ ನಾಯಕನಾದ ಥಾನತುನ ಎಂಬವನನ್ನು ರಂಗೂನಿನ ಪೋಲೀಸರು ಹಿಡಿದಿದ್ದಾರೆ. ನಗರದ ಪೋಲೀಸರು ತಕ್ಕ ಕ್ರಮ ಕೈಗೊಳ್ಳಲಿರುವರೆಂದೂ ಅದ್ದರಿಂದ ನಾಗರಿಕರು ಅಂಜಬಾರದೆಂದೂ ಕೇಳಿಕೊಳ್ಳಲಾಗಿದೆ. ಒಮ್ಮೆ ಮಕ್ಕಳನ್ನು ಕೊಲ್ಲುವರೆಂದೂ ಹೊತ್ತುಕೊಂಡು ಹೋಗುವರೆಂದೂ ಹೆದರಿ ರಂಗೂನಿನ ಅನೇಕ ಪ್ರಾಥಮಿಕ ಶಾಲೆಗಳನ್ನು ಮುಚ್ಚಲಾಗಿತ್ತು. ಮೊದಲು ದಂಡಿನವರು ಮಧ ಬ್ರಹ್ಮದೇಶ ಇರಾವತೀ ಮುಖಜಭೂಮಿ ಮತ್ತು ಆರಾಕಾನು ಪ್ರದೇಶಗಳಲ್ಲಿ ಪುಂಡರ ತಪಾಸಣೆಗಾಗಿ ಹೊರಡುವರೆಂದು ತಿಳಿಯುತ್ತದೆ.